ಉಪನ್ಯಾಸ
ಗ್ರಂಥಮಾಲೆ

೧೦೧

# ಹರ್ಡೇಕರ ಮಂಜಪ್ಪನವರು
## ಹಾಗೂ
# ಅವರ ಕೃತಿಗಳು

ಪ್ರೊ. ಜಿ. ಎಸ್. ಹಾಲಪ್ಪ,
ಎಂ. ಎ. (ಕೋಲಂಬಿಯಾ)




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಜುಲೈ, ೧೯೭೦

# ಹರ್ಡೇಕರ ಮಂಜಪ್ಪನವರು

ಹಾಗೂ

# ಅವರ ಕೃತಿಗಳು



ಉಪನ್ಯಾಸ ಗ್ರಂಥಮಾಲೆ
೧೦೧

# ಹರ್ಡೇಕರ ಮಂಜಪ್ಪನವರು
## ಹಾಗೂ
# ಅವರ ಕೃತಿಗಳು

ಪ್ರೊ. ಜಿ. ಎಸ್. ಹಾಲಪ್ಪ,
ಎಂ. ಎ. (ಕೋಲಂಬಿಯಾ)




ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
ಜುಲೈ, ೧೯೭೦

ಪ್ರಕಾಶಕರು :

**ಎಸ್. ಎಸ್. ಒಡೆಯರ,**

ಎಂ. ಎ., ಎಲ್‌ಎಲ್. ಬಿ.

ರಜಿಸ್ಟ್ರಾರ್,

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ಜುಲೈ ೧೯೭೦ - ೫೦೦೦ ಪ್ರತಿಗಳು.



ಬೆಲೆ : **೨೫ ಪೈಸೆ**

ಮುದ್ರಕರು :

**ಕೆ. ಜಿ. ಜೋಶಿ**

ಸೆಕ್ರೆಟರಿ, ಕೆ. ಇ. ಬೋರ್ಡ

ಕೆ. ಇ. ಬೋರ್ಡ್ಸ್ ಪ್ರಿಂಟಿಂಗ ಪ್ರೆಸ್

ಧಾರವಾಡ-೧

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವುದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನ-ಪ್ರಸಾರದ ಕಾರ್ಯದಲ್ಲಿ ಭಾಗವಹಿಸುವುದರಿಂದ ವಿಶ್ವವಿದ್ಯಾ-ಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವದಲ್ಲದೆ ಎಂಥ ವಿಷಯ ವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರೆವಣಿಗೆಯಲ್ಲಿಳಿಸುವ ಅವಕಾಶ ದೊರೆ ಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿ ಸುತ್ತಿರುವುದು ಶ್ಲಾಘನೀಯ.

## ಮುನ್ನುಡಿ

ಈ ಮಾಲೆಯಲ್ಲಿ ಈಗಾಗಲೆ ನೂರು ಪುಸ್ತಕಗಳು ಪ್ರಕಟ-ವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಎರಡು–ಮೂರು ಮುದ್ರಣಗಳನ್ನೂ ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿ-ಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಧನಸಹಾಯ ಆಯೋಗದವರು ಉಪನ್ಯಾಸ ಶಿಬಿರಗಳಿಗೂ, ಈ ಪುಸ್ತಿಕೆಗಳ ಪ್ರಕಟನೆಗೂ ನೆರವು ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾದ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಎ. ಎಸ್. ಅಡಕೆ
ಕುಲಪತಿ
ಕರ್ನಾಟಕ ವಿಶ್ವವಿದ್ಯಾಲಯ

ಧಾರವಾಡ
೧–೭–೧೯೭೦

# ಅರಿಕೆ

ಹರ್ಡೇಕರ ಮಂಜಪ್ಪನವರ ಸಮಗ್ರ ಕೃತಿಗಳ ಸಂಕಲನವನ್ನು ವಿಮರ್ಶೆಯೊಂದಿಗೆ ಹರ್ಡೇಕರಮಂಜಪ್ಪ ಸ್ಮಾರಕ ಗ್ರಂಥ ಮಾಲೆಯು ಪ್ರಕಟಿಸಿರುವುದು ಎಲ್ಲರಿಗೂ ಗೊತ್ತಿದೆ. ಕನ್ನಡ ನಾಡಿನ ಉಜ್ವಲ ವಿಚಾರವೇತ್ತರೂ ಕನ್ನಡ ನುಡಿಯ ಭಕ್ತರೂ ಆಗಿದ್ದ ಮಂಜಪ್ಪನವರ ಜೀವನ ಮತ್ತು ಕೃತಿಗಳನ್ನು ಕುರಿತು ಜನಸಾಮಾನ್ಯರು ಓದಲು ಉಪಯುಕ್ತವಾಗುವಂತೆ ಕರ್ನಾಟಕ ವಿಶ್ವವಿದ್ಯಾಲಯದವರು ಇದೀಗ ಈ ಪುಟ್ಟ ಪುಸ್ತಕವನ್ನು ಹೊರ ತಂದಿದ್ದಾರೆ.

ಹೊಂಬಳದಲ್ಲಿ ದಿ. ೨೯–೪–೭೦ ರಂದು ಏರ್ಪಡಿಸಿದ ವ್ಯಾಸಂಗ ವಿಸ್ತರಣ ಸಮಿತಿಯ ಉಪನ್ಯಾಸ ಶಿಬಿರದಲ್ಲಿ ಈ ವಿಷಯವನ್ನು ಕುರಿತು ಉಪನ್ಯಾಸವನ್ನು ಏರ್ಪಡಿಸಲಾಗಿತ್ತು. ಆ ಭಾಷಣವನ್ನು ಈ ಕಿರುಹೊತ್ತಿಗೆಯ ರೂಪದಲ್ಲಿ ಈಗ ಪ್ರಕಟಿಸ ಲಾಗಿದೆ. ಹೊಂಬಳದಲ್ಲಿ ಭಾಷಣ ಮಾಡಲು ಪ್ರೇರೇಪಿಸಿದ ಹಾಗು ಪುಸ್ತಕ ಬರೆದು ಕೊಡಲು ಪ್ರೋತ್ಸಾಹಿಸಿದ ಶ್ರೀ ಚೆನ್ನವೀರ ಕಣವಿ ಅವರಿಗೆ ನನ್ನ ವಂದನೆ ಸಲ್ಲಬೇಕು. ಈ ಪುಸ್ತಕವನ್ನು ಪ್ರಕಟಿಸಲು ಮುಂದೆ ಬಂದ ವಿಶ್ವವಿದ್ಯಾಲಯದ ಅಧಿಕಾರಿ ವರ್ಗಕ್ಕೆ ಅಭಿನಂದನೆಗಳು. ಶ್ರೀ ಮಂಜಪ್ಪಣ್ಣನವರ ಆದರ್ಶ ಜೀವನ ಮತ್ತು ಉದಾತ್ತ ವಿಚಾರಗಳನ್ನು ತಿಳಿಸುವ ಈ ಪುಸ್ತಕವನ್ನು ಓದುಗರು ಸ್ವಾಗತಿಸುವರೆಂದು ನಂಬಿದ್ದೇನೆ.

ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ
೬–೭–೧೯೭೦

**ಗ. ಸ. ಹಾಲಪ್ಪ**

# ಪರಿವಿಡಿ



ಹರ್ಡೇಕರ ಮಂಜಪ್ಪನವರು

೧೮-೨-೧೮೮೬ ೩-೧-೧೯೪೭

# ಹರ್ಡೇಕರ ಮಂಜಪ್ಪನವರು
ಹಾಗೂ
# ಅವರ ಕೃತಿಗಳು

## ೧. ಜೀವನದ ಮುಖ್ಯ ಸಂಗತಿಗಳು

### ಪೂರ್ವವೃತ್ತಾಂತ

ಕ್ರಿ. ಶ. ೧೮೮೬ ಫೆಬ್ರುವರಿ ೧೮ ರಂದು ಉತ್ತರ ಕನ್ನಡ ಜಿಲ್ಲೆಯ ಬನವಾಸಿ ಗ್ರಾಮದಲ್ಲಿ ಮಂಜಪ್ಪನವರು ಬಡಕುಟುಂಬ ದಲ್ಲಿ ಜನಿಸಿದರು. ಇವರ ಅಣ್ಣ ಮಧುಲಿಂಗಪ್ಪನವರು ಶಿಕ್ಷಣ ವನ್ನು ಪೂರೈಸಿದೊಡನೆ ಮನೆತನದ ಹೊಣೆಯನ್ನು ಹೊತ್ತು ಶಿರಸಿ ತಾಲೂಕ ಕಚೇರಿಯಲ್ಲಿ ಕಾರಕೂನ ಹುದ್ದೆಯನ್ನು ವಹಿಸಿ ಕೊಂಡರು. ಮಂಜಪ್ಪನವರು ೧೯೦೩ ರಂದು ಕನ್ನಡ ಮುಲಕೀ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಅಂದು ಅವರಿಗೆ ೧೭ ವರುಷ. ಶಿರಸಿಯ ಕನ್ನಡ ಶಾಲಾ ಹೆಡ್‌ಮಾಸ್ತರ ಶ್ರೀ ಸಂಗನಬಸವಯ್ಯ ನವರು 'ಮಂಜು'ವನ್ನು ಅಕ್ಕರೆಯಿಂದ ಅವರ ಕನ್ನಡ ಶಾಲೆಯಲ್ಲಿ

ಶಿಕ್ಷಕನನ್ನಾಗಿ ನೇಮಿಸಿಕೊಂಡರು. ತಿಂಗಳಿಗೆ ಏಳು ರೂ. ಸಂಬಳ ಗಳಿಸುವ ಮಾಸ್ತರ ಜೀವನ ಹೀಗೆ ಆರಂಭವಾಯಿತು. ೧೯೦೫ ರಲ್ಲಿ ಪ್ರತ್ಯೇಕ ಕನ್ನಡ ಶಾಲೆಯ ಅಧ್ಯಾಪಕರೆಂದು ನೇಮಕವಾಯಿತು.

## ಶಿಕ್ಷಕ ವೃತ್ತಿಗೆ ಶರಣು ಮತ್ತು ಸಾರ್ವಜನಿಕ ಜೀವನದ ಆರಂಭ

ಆದರೆ ಈ ಶಿಕ್ಷಕ ವೃತ್ತಿಯಲ್ಲಿ ಮಂಜಪ್ಪನವರು ಬಹುಕಾಲ ಮುಂದುವರೆಯಲಿಲ್ಲ. ಶಿಕ್ಷಕ ವೃತ್ತಿಯು ಇವರಿಗೆ ಹಿಡಿಸುತ್ತಿರಲಿಲ್ಲವೆಂದಲ್ಲ. ಭಾರತದಲ್ಲಿ ಅಂದು ವಂಗಭಂಗ ಚಳುವಳಿಯಿಂದಾಗಿ ಉಂಟಾಗಿದ್ದ ನವೋದಯದ ಹೊಸಗಾಳಿ ಮೂಲೆಯಲ್ಲಿದ್ದ ಶಿರಸಿಯ ಮೇಲೂ ಬೀಸದಿರಲಿಲ್ಲ. ಮಂಜಪ್ಪನವರು ತಮ್ಮ ಅಣ್ಣಂದಿರೊಡನೆ ವರ್ತಮಾನ ಪತ್ರಿಕೆಯನ್ನು ಹೊರಡಿಸಬೇಕೆಂದು ನಿರ್ಧರಿಸಿ ದಾವಣಗೆರೆಗೆ ಬಂದರು. ೧೯೦೬ ರಲ್ಲಿ ಶಿಕ್ಷಕವೃತ್ತಿಗೆ ಶರಣುಹೊಡೆದು 'ಧನುರ್ಧಾರಿ' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ದಾವಣಗೆರೆಯು ಮಂಜಪ್ಪನವರ ಸಾರ್ವಜನಿಕ ಜೀವನದ ತರಬೇತಿಕೇಂದ್ರವಾಯಿತು. ೨೫ನೆಯ ವಯಸ್ಸಿನಲ್ಲಿ ಲಗ್ನವಾಗಬಾರದೆಂದು ನಿಶ್ಚಯ ಮಾಡಿ ಸಾರ್ವಜನಿಕ ಜೀವನವನ್ನು ಆರಂಭಿಸಿದರು. ದಾವಣಗೆರೆಯಲ್ಲಿ ಅಂದು ಧಾರವಾಡದ ಶ್ರೀ ಮೃತ್ಯುಂಜಯ ಸ್ವಾಮಿಗಳು ಮಠಾಧಿಪತಿಗಳಾಗಿದ್ದರು. ಅವರ ಪ್ರೋತ್ಸಾಹದಿಂದ ಭಜನಾ ಸಂಘ ಮತ್ತು ಶ್ರಾವಣ ಮಾಸೋಪನ್ಯಾಸ ಮಾಲೆಯನ್ನು ಸ್ಥಾಪಿಸಿದರು. ಬಸವ ಜಯಂತಿಯನ್ನು ನವೀನ ರೀತಿಯಲ್ಲಿ ಆಚರಿಸುವುದನ್ನು ೧೯೧೩ ರಲ್ಲಿ ಪ್ರಾರಂಭಿಸಿದರು. ೧೯೧೪ ರಲ್ಲಿ ಲೋಕಮಾನ್ಯ ತಿಲಕರನ್ನು

ಪುಣೆಯಲ್ಲಿ ಸಂದರ್ಶಿಸಿ ಅವರೊಡನೆ ರಾಷ್ಟ್ರೀಯ ಸಮಸ್ಯೆಗಳನ್ನು ಚರ್ಚಿಸಿದರು. ಅವರು ಬರೆದ 'ಗೀತಾರಹಸ್ಯ'ವನ್ನು ಕನ್ನಡಕ್ಕೆ ಅನುವಾದಿಸಲು ಅಪ್ಪಣೆ ಕೇಳಿದರು.

ದಾವಣಗೆರೆಯಿಂದ ಪ್ರಕಟವಾಗುತ್ತಿದ್ದ ಈ ಕನ್ನಡ ಪತ್ರಿಕೆಯು ರಾಷ್ಟ್ರೀಯತೆಯ ಸಂದೇಶವನ್ನು ಸಾರುವ ಪ್ರಚಾರ ಸಾಧನವಾಗಿತ್ತು. ಪುಣೆಯ 'ಕೇಸರಿ' ಪತ್ರಿಕೆಯ ಹಾಗೂ ಲೋಕ ಮಾನ್ಯ ತಿಲಕರ ಪ್ರಭಾವ ಮಂಜಪ್ಪನವರ ಮೇಲೆ ತುಂಬಾ ಆಗಿತ್ತು. ಆಗಿನ ಕಾಲದಲ್ಲಿ ಪತ್ರಿಕೆ ನಡೆಸುವುದು ಬಹಳ ಕಷ್ಟದ ಕೆಲಸವಾಗಿತ್ತು. ಹಣದ ಕೊರತೆ ಬೇರೆ. ದಾವಣಗೆರೆಯ ಬೋಂದಾಡೆ ಬಾಳಪ್ಪನವರು ಮಂಜಪ್ಪನವರಿಗೆ ಬಹಳ ನೆರ ವಾದರು. ರಾಷ್ಟ್ರೀಯ ವಿಚಾರಗಳನ್ನು ಪ್ರಚಾರ ಮಾಡುವ ಪತ್ರಿಕೆಯ ಧೋರಣೆಯನ್ನು ಮೈಸೂರು ಸರಕಾರದವರು ಮೆಚ್ಚುತ್ತಿರಲಿಲ್ಲ. ಉಗ್ರ ಲೇಖನಗಳನ್ನು ಪ್ರಕಟಿಸಬಾರದೆಂದು ಸರಕಾರಿ ಅಧಿಕಾರಿಗಳು ಎಚ್ಚರಿಕೆ ನೀಡಲಾರಂಭಿಸಿದರು. ಡೆಪ್ಯುಟಿ ಕಮಿಶನರ್ ಅವರು 'ನೀವು ಪ್ರಕಟಿಸುತ್ತಿರುವ ಲೇಖನಗಳು ಮೈಸೂರ ಪ್ರೆಸ್ ಆಕ್ಟಿನಂತೆ ಅಪರಾಧಕರವಾಗಿವೆ. ಇನ್ನು ಮೇಲೆ ಇಂಥ ಲೇಖನಗಳನ್ನು ಪ್ರಕಟಿಸಬಾರದು' ಎಂದು ಎಚ್ಚರಿಸಿದರು. ಹಣದ ಅಭಾವ, ಜೊತೆಗೆ ಸರಕಾರದವರಿಂದ ವಿರೋಧ. ಇಂಥ ಪರಿಸ್ಥಿತಿಯಲ್ಲಿ ಪತ್ರಿಕೆ ಎಷ್ಟು ದಿನ ನಡೆದೀತೆಂಬ ಭರವಸೆಯಿರ ಲಿಲ್ಲ. ಶಿರಸಿಯಿಂದ ಅಣ್ಣ ತಮ್ಮ ಇಬ್ಬರೂ ತಮ್ಮ ಹುದ್ದೆಗಳಿಗೆ ರಾಜಿನಾಮೆ ಕೊಟ್ಟು ಪತ್ರಿಕೆಯನ್ನು ಹೊರಡಿಸುವ ಸಾಹಸಕ್ಕೆ ಕೈಹಾಕಿದ್ದು ಅಷ್ಟೇನು ಲಾಭದಾಯಕವಾಗಿರಲಿಲ್ಲ. ಪತ್ರಿಕೆಯ

ಉದ್ಯಮಂ ಓೀಗೆ ಉತ್ತೇಜನಕಾರಿಯಾಗಿ ಕಂಡು ಬರಲಿಲ್ಲವಾದುದ ರಿಂದ ಮಂಜಪ್ಪನವರು ಪುಸ್ತಕ ರಚನೆ ಮುಂತಾದ ರಚನಾತ್ಮಕ ಚಟುವಟಿಕೆಗಳನ್ನು ಆರಂಭಿಸಿದರು. ೧೯೧೫ ರಲ್ಲಿ 'ಧನುರ್ಧಾರಿ' ಹಣದ ಕೊರತೆಯಿಂದ ನಿಂತಿತು. 'ಸ್ವಕರ್ತವ್ಯ ಸಿದ್ಧಾಂತ' ಎಂಬ ಇವರ ಮೊದಲನೆಯ ಪುಸ್ತಕ ೧೯೧೫ ರಲ್ಲಿ ಬೆಂಗಳೂರಿನ ಒಕ್ಕಲಿ-ಗರ ಮುದ್ರಣಾಲಯದಲ್ಲಿ ಅಚ್ಚಾಗಿ ಹೊರಬಿದ್ದಿತು. ಮುಂದಿನ ವರುಷ ಅವರು ಬರೆದ 'ಬುದ್ಧಿಯ ಮಾತು' ಎಂಬ ಬೋಧಪ್ರದ ಪುಸ್ತಕ ಪ್ರಕಟವಾಯಿತು.

## ರಾಷ್ಟ್ರೀಯ ವಿಮೋಚನೆಯ ಹೋರಾಟ ಜೀವನ

ರಾಷ್ಟ್ರೀಯ ಸಂದೇಶವನ್ನು ಜನತೆಯಲ್ಲಿ ಪ್ರಚಾರಗೊಳಿ ಸಲು ಕಂಕಣಕಟ್ಟಿ ದುಡಿಯಲು ಮುಂದೆ ಬಂದ ಮಂಜಪ್ಪನವರು ಮುಂದೆ ಮಹಾತ್ಮ ಗಾಂಧಿಯವರ ಜೀವನದಿಂದ ಪ್ರಭಾವಿತ ರಾದರು. ಗಾಂಧೀಜಿಯವರ ಜೀವನ ಮತ್ತು ವ್ಯಾಖ್ಯಾನಗಳನ್ನು ಕುರಿತು ೧೯೧೯ರಲ್ಲಿ ಒಂದು ಪುಸ್ತಕವನ್ನು ಪ್ರಕಟಿಸಿದರು. ಕನ್ನಡ ದಲ್ಲಿ ಗಾಂಧೀಜಿಯವರ ಜೀವನ ಚರಿತೆಯನ್ನು ಮೊಟ್ಟಮೊದಲು ಬರೆದ ಶ್ರೇಯಸ್ಸು ಮಂಜಪ್ಪನವರಿಗೆ ಸಲ್ಲುತ್ತದೆ. ರಾಷ್ಟ್ರಧರನ ಸಾಧಕಜೀವನದಲ್ಲಿ ತೊಡಗಿದ್ದ ಇವರು ೧೯೨೦ರಿಂದ ಖಾದಿ ಧರಿ-ಸಲು ಪ್ರಾರಂಭಿಸಿ ಗಾಂಧಿ ಮತ್ತು ಬಸವೇಶ್ವರರ ಜೀವನದಲ್ಲಿದ್ದ ಹೋಲಿಕೆಗಳನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಿದರು. 'ರಾಷ್ಟ್ರಜೀವನ' ಗ್ರಂಥಮಾಲೆಯನ್ನು ಆರಂಭಿಸಿ 'ಭಾರತೀಯರ ದೇಶಭಕ್ತಿ' ಮತ್ತು 'ಶ್ರೀಸ್ವಾಮಿ ರಾಮತೀರ್ಥರ ಜೀವನ ಚರಿತ್ರೆ ಮತ್ತು ಉಪನ್ಯಾಸ' ಎಂಬ ಗ್ರಂಥಗಳನ್ನು ಪ್ರಕಟ ಮಾಡಿದರು.

ಗಾಂಧೀಜಿಯವರ ಸತ್ಯಾಗ್ರಹ ಧರ್ಮವನ್ನು ಚೆನ್ನಾಗಿ ಅರ್ಥ ಮಾಡಿಕೊಂಡು ಪುಸ್ತಕವನ್ನು ಬರೆದರು.

ಕನ್ನಡನಾಡಿನಲ್ಲಿ ರಾಷ್ಟ್ರೀಯ ಚಟುವಟಿಕೆಗಳಿಗೆ ಹೊಸ ಚಾಲನೆಯನ್ನು ನೀಡಿದ ಕೀರ್ತಿ ಮಂಜಪ್ಪನವರಿಗೆ ಸಲ್ಲುತ್ತದೆ. ೧೯೨೦ರ ಹೊತ್ತಿಗೆ ಮಂಜಪ್ಪನವರು ಅಪ್ಪಟ ರಾಷ್ಟ್ರೀಯವಾದಿಯಾಗಿದ್ದರು. ೧೯೨೩ರಲ್ಲಿ ಹರಿಹರದ ತುಂಗಭದ್ರಾ ನದಿಯ ತೀರದಲ್ಲಿ ಸತ್ಯಾಗ್ರಹಾಶ್ರಮ ಸ್ಥಾಪಿಸಿದಮೇಲೆ ರಾಷ್ಟ್ರೀಯ ಧರ್ಮ ಮತ್ತು ಸತ್ಯಾಗ್ರಹ ತತ್ವಗಳನ್ನು ಪ್ರಚಾರ ಮಾಡಲು ಹೆಚ್ಚು ಗಮನವಿತ್ತರು. ೧೯೨೩ರಲ್ಲಿ ಹಾವೇರಿಯಲ್ಲಿ ಸೇರಿದ ಧಾರವಾಡ ಜಿಲ್ಲಾ ರಾಷ್ಟ್ರೀಯ ಸಭೆಯ ಅಧ್ಯಕ್ಷತೆ ವಹಿಸಿ ಭಾಷಣ ಮಾಡಿದರು. ಇದೇ ವರ್ಷ ವಿಜಾಪುರದಲ್ಲಿ ಶ್ರೀ ರಾಜಾಜಿ ಅವರ ಅಧ್ಯಕ್ಷತೆಯಲ್ಲಿ ಜರುಗಿದ ಪ್ರಾಂತಿಕ ಸಭೆಗೆ ಹೋಗಿ ಅಲ್ಲಿ ಸೇರಿದ್ದ ಪ್ರಚಂಡವಾದ ಬಹಿರಂಗ ಸಭೆಯಲ್ಲಿ ಭಾಷಣಮಾಡಿ ಜನಜಾಗೃತಿಯನ್ನುಂಟು ಮಾಡಿದರು. ೧೯೨೪ರಲ್ಲಿ ಸಾಬರಮತಿಗೆ ಹೋಗಿ ಗಾಂಧೀಜಿಯವರಲ್ಲಿ ಕೆಲದಿನ ವಾಸಮಾಡಿ ಗಾಂಧೀಜಿಯವರ ಪರಿಚಯ ಮಾಡಿಕೊಂಡರು. ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ಅಖಿಲಭಾರತ ಕಾಂಗ್ರೆಸ್ಸಿನ ಅಧಿವೇಶನವು ಕರ್ನಾಟಕದ ಇತಿಹಾಸದಲ್ಲಿ ಸಂಸ್ಮರಣೀಯವಾಗಿದೆ ಈ ಅಧಿವೇಶನದಲ್ಲಿ ಗಾಂಧೀಜಿ ಅಧ್ಯಕ್ಷ ಭಾಷಣ ಮಾಡಿದರು. ಈ ಅಧಿವೇಶನ ಕಾಲದಲ್ಲಿ ಮಂಜಪ್ಪನವರು 'ಬಸವೇಶ್ವರ ಸೇವಾದಳ' ಎಂಬ ಸ್ವಯಂಸೇವಕ ದಳವನ್ನು ಬೆಳಗಾವಿ ಅಧಿವೇಶನಕ್ಕೆ ಕರೆದೊಯ್ದರು. 'ಸತ್ಯಾಗ್ರಹಿ ಬಸವೇಶ್ವರ' ಎಂಬ ಮರಾಟಿ ಮತ್ತು ಹಿಂದಿ ಪುಸ್ತಕಗಳನ್ನು ಬರೆ

ಯಿಸಿ ಪ್ರಕಟಿಸಿ ಹಿಂದಿ ಪ್ರತಿಯನ್ನು ಗಾಂಧೀಜಿಗೆ ಅರ್ಪಿಸಿದರು. ಬೆಳಗಾವಿ ಅಧಿವೇಶನ ಕಾಲದಲ್ಲಿ ವೀರಶೈವ ಪರಿಷತ್ತನ್ನು ಸೇರಿಸಿ ಗಾಂಧೀಜಿ ಮತ್ತು ಇತರ ನಾಯಕರನ್ನು ಬರಮಾಡಿಕೊಂಡು ಬಸ-ವೇಶ್ವರರ ಸಮಾಜ ಸುಧಾರಣಾ ಕಾರ್ಯವನ್ನು ವಿವರಿಸಿದರು. ಅಂದು ಗಾಂಧೀಜಿಯವರು ಬಸವೇಶ್ವರರ ಕಾರ್ಯವನ್ನು ಮುಕ್ತ ಕಂಠದಿಂದ ಪ್ರಶಂಸಿಸಿದರು.

ಲೋಕಮಾನ್ಯ ತಿಲಕರು ಮಹಾರಾಷ್ಟ್ರದಲ್ಲಿ ಗಣೇಶಉತ್ಸವ ಮತ್ತು ಶಿವಾಜಿ ಜಯಂತಿಗಳ ಮೂಲಕ ರಾಷ್ಟ್ರೀಯ ಜಾಗೃತಿಯನ್ನುಂಟುಮಾಡಿದಂತೆ ಮಂಜಪ್ಪನವರು ಗಾಂಧೀಜಿ ಮತ್ತು ಬಸವೇಶ್ವರರ ಜೀವನದಲ್ಲಿರುವ ಸಾಮಾನ್ಯ ಅಂಶಗಳನ್ನು ಎತ್ತಿ ತೋರಿಸಿ ಕನ್ನಡನಾಡಿನಲ್ಲಿ ರಾಷ್ಟ್ರೀಯತೆಯ ಪ್ರಸಾರಕ್ಕೆ ನೆರವಾದರು. ೧೯೨೪ರಲ್ಲಿ ಸಂಶೋಧನೆಮಾಡಿ 'ಶ್ರೀ ಬಸವ ಚರಿತ್ರೆ' ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿ ಕನ್ನಡನಾಡಿಗೆ ದೊಡ್ಡ ಉಪಕಾರ ಮಾಡಿದರು. ಈ ಗ್ರಂಥಪ್ರಕಟನೆಯಿಂದ ಬಸವೇಶ್ವರರ ಬಗ್ಗೆ ಉಂಟಾಗಿದ್ದ ಅನೇಕ ತಪ್ಪು ಅಭಿಪ್ರಾಯಗಳ ನಿವಾರಣೆಯಾಯಿತು. ಬಸವೇಶ್ವರರು ಒಬ್ಬ ರಾಷ್ಟ್ರೀಯ ಮಹಾನುಭಾವರೆಂಬ ಭಾವನೆ ಜನತೆಯಲ್ಲಿ ಬೇರೂರಲು ಸಹಾಯವಾಯಿತು.

## ಆಲಮಟ್ಟಿಯ ಶರಣಜೀವನ

೧೯೨೫ರಲ್ಲಿ ಮಾತೃವಿಯೋಗವಾಯಿತು. ಇದಕ್ಕೂ ಮುಂಚೆ ತುಂಗಭದ್ರಾ ನದಿ ವಿಪರೀತವಾಗಿ ಏರಿ ಇವರು ವಾಸಿಸುತ್ತಿದ್ದ ಆಶ್ರಮ ನೀರಿನಲ್ಲಿ ಮುಳುಗಿತು. ಇಲ್ಲಿ ವಾಸಿಸುವುದು ಗಂಡಾಂತರಕಾರಿ ಎಂದು ಸ್ಪಷ್ಟವಾಯಿತು. ತಾಯಿಯವರು ತೀರಿಕೊಂಡಮೇಲೆ

ನಿಶ್ಚಿಂತೆಯಿಂದ ಪ್ರವಾಸಮಾಡಲು ಅವಕಾಶವಾಯಿತು. ಉತ್ತರ ಕರ್ನಾಟಕದ ವಿಜಾಪುರ, ಕಲಬುರ್ಗಿ ಮೊದಲಾದ ಕಡೆ ವಿಶೇಷ ವಾಗಿ ಸಂಚರಿಸಿ ವ್ಯಾಖ್ಯಾನಗಳನ್ನು ನೀಡಿದರು. ಕಡೆಗೆ ಆಲಮಟ್ಟಿ ಯಲ್ಲಿ ನೆಲಸಲು ನಿರ್ಧರಿಸಿದರು. ತುಂಗಭದ್ರಾ ತೀರದಿಂದ ಈಗ ಕೃಷ್ಣಾ ತೀರಕ್ಕೆ ಬಂದು ಶರಣಜೀವನವನ್ನು ನಡೆಸಿದರು. ಆಲಮಟ್ಟಿ ಯಲ್ಲಿ ಗಾಂಧೀಜಿಯವರ ಸಲಹೆಯಂತೆ ವೃತ್ತಿಪ್ರಧಾನವಾದ ವಿದ್ಯಾಲಯವನ್ನು ಸ್ಥಾಪಿಸಿದರು. ೧೯೨೮ ಮತ್ತು ೧೯೩೦ರಲ್ಲಿ 'ಖಾದಿವಿಜಯ' ಮತ್ತು 'ಉದ್ಯೋಗ' ಮಾಸಪತ್ರಿಕೆಗಳನ್ನು ಸ್ಥಾಪಿಸಿ ಒಂದೆರಡು ವರ್ಷ ನಡೆಸಿದರು. ೧೯೩೧ರಲ್ಲಿ 'ಶರಣಸಂದೇಶ' ವಾರ ಪತ್ರಿಕೆಯನ್ನು ಪ್ರಾರಂಭಿಸಿದರು. ೧೯೩೬ರಲ್ಲಿ 'ಕಳೆದ ಮೂವತ್ತು ವರ್ಷಗಳ ನನ್ನ ಕಾಣಿಕೆ' ಎಂಬ ಅವರ ಆತ್ಮಚರಿತ್ರೆಯನ್ನು ಪ್ರಕಟಿ ಸಿದರು. ಆಲಮಟ್ಟಿ ಆಶ್ರಮವು ಪಾಂಡಿಚೇರಿಯ ಅರವಿಂದರ ಆಶ್ರಮದಂತೆ ಯಾತ್ರಾಸ್ಥಳವಾಯಿತು. ಇಲ್ಲಿಂದಲೇ 'ಶುದ್ಧಿ ಸಂಘಟನೆ' 'ವಚನಕಾರರ ಸಮಾಜರಚನೆ' 'ಸುಬೋಧಸಾರ' ಮುಂತಾದ ಗ್ರಂಥಗಳು ಅರಳಿದವು. ೧೯೪೫ರಲ್ಲಿ 'ಪ್ರಗತಿ ಗ್ರಂಥ ಮಾಲೆ'ಯ ಯೋಜನೆಯನ್ನು ತಯಾರಿಸಿದರು. ೧೯೪೬ರಲ್ಲಿ ಅವರ ಹುಟ್ಟುಹಬ್ಬದಂದು 'ಎಚ್ಚತ್ತ ಹಿಂದುಸ್ಥಾನ' ಎಂಬ ಪುಸ್ತಕವನ್ನು ಪ್ರಕಟಿಸಿದರು. ೬೦ ವರ್ಷ ತುಂಬಿದಮೇಲೆ ಕೆಲಸದ ಒತ್ತಡ ದಿಂದಾಗಿ ಮೈಯಲ್ಲಿ ಅಸ್ವಸ್ಥತೆಯುಂಟಾಯಿತು. ಬಿಡುವಿಲ್ಲದ ಕಟ್ಟು ನಿಟ್ಟಿನ ಜೀವನ ನಡೆಸಿದ್ದ ಈ ಮಹಾವ್ಯಕ್ತಿ ೧೯೪೭ ಜನವರಿ ೩ರಂದು ಲಿಂಗೈಕ್ಯರಾದರು. ಸಾಯುವುದಕ್ಕಿಂತ ಮುಂಚೆ ಕನ್ನಡ ನಾಡಿಗೆ ಈ ಸಂದೇಶವನ್ನು ನೀಡಿದರು. "ಧೀರರಾಗಿರಿ, ಪವಿತ್ರ ರಾಗಿರಿ, ಸ್ವತಂತ್ರ ರಾಷ್ಟ್ರವೀರರಾಗಿರಿ, ಇದು ನನ್ನ ಕಡೆಯ

ಮನವಿ." ೧೯೪೭ರ ಆಗಸ್ಟದಲ್ಲಿ ಭಾರತ ಸ್ವತಂತ್ರವಾಯಿತು. ಜೀವನದ ಕೊನೆಯ ಉಸಿರು ಎಳೆಯುವ ಮುನ್ನವೂ ಸ್ವಂತದ ಆಶೆ-ಆಕಾಂಕ್ಷೆ ಹೊಂದಿರದೆ ದೇಶ ಮತ್ತು ಜನದ ಹಿತಚಿಂತನೆ ಮಾಡಿದ ಇಂಥ ದೇಶಭಕ್ತರು ಎಷ್ಟು ಜನ ದೊರಕಬಲ್ಲರು ?

ಹರ್ಡೇಕರ ಮಂಜಪ್ಪನವರ ಜೀವನ ಪವಿತ್ರವಾದುದು. ಅವರ ಆದರ್ಶಗಳು ಎಂದೆಂದಿಗೂ ಯುವಕರಿಗೆ ಸ್ಫೂರ್ತಿದಾಯಕವಾಗಿವೆ. ತಮ್ಮ ಜೀವನ ದೃಷ್ಟಿ ಏನಿತ್ತು ಎಂಬುದನ್ನು ಅವರ ಮಾತುಗಳಿಂದಲೇ ಅರಿಯಬೇಕು. ಅವರು ಬರೆದು ಪ್ರಕಟಿಸಿದ ತಮ್ಮ ಆತ್ಮವೃತ್ತಾಂತದ ಪುಸ್ತಕದಿಂದ ಸಂಗ್ರಹಿಸಿ ಮುಂದಿನ ಅಧ್ಯಾಯದಲ್ಲಿ ಕೊಡಲಾಗಿದೆ. ಇದು ಅವರ ಜೀವನದ ಗುರಿಯ ಮೇಲೆ ಬೆಳಕು ಚೆಲ್ಲಬಹುದಾಗಿದೆ.



## ೨. "ನನ್ನ ಕೆಲವು ವಿಚಾರಗಳು"*

ನನ್ನ ಈವರೆಗಿನ ಸಾರ್ವಜನಿಕ ಕಾರ್ಯಗಳಿಗೆ ಸಂಬಂಧಿಸಿರುವ ಧಾರ್ಮಿಕ, ಸಾಮಾಜಿಕ, ನೈತಿಕ ಮತ್ತು ರಾಜಕೀಯ ವಿಷಯಗಳಲ್ಲಿ ನಾನು ಯಾವ ವಿಧವಾದ ಅಭಿಪ್ರಾಯವುಳ್ಳವನಾಗಿದ್ದೇನೆಂಬುದೂ ನನ್ನ ಸಹಾಯಕರಾದ ಮಹಾಶಯರಿಗೆ ಸ್ವಲ್ಪ ಗೊತ್ತಿರುವದು ಯುಕ್ತವೆಂದು ತಿಳಿದು ಇಲ್ಲಿ ಸಂಕ್ಷಿಪ್ತವಾಗಿ ತಿಳಿಸಿದ್ದೇನೆ. ಈ ಎಲ್ಲ ವಿಷಯಗಳನ್ನು ಕುರಿತು ನಾನು ಬೇರೆ ಬೇರೆ ಪುಸ್ತಕಗಳನ್ನು ಬರೆಯುವವನಿದ್ದೇನೆ. ಅವುಗಳಲ್ಲಿ ನನ್ನ ಅಭಿಪ್ರಾಯಗಳು ವಿವರವಾಗಿ ತಿಳಿಸಲ್ಪಡುವವು.

**ಧಾರ್ಮಿಕ :—** ದೇವರು, ಪುನರ್ಜನ್ಮ, ಸ್ವರ್ಗ ನರಕ, ಪುಣ್ಯ, ಪಾಪ ಈ ಮುಂತಾದ ಅಪ್ರತ್ಯಕ್ಷ ಸಂಗತಿಗಳನ್ನು ಮಾತ್ರ ನಾನು ಧಾರ್ಮಿಕ ವಿಷಯವೆಂಬುದರಲ್ಲಿ ಪರಿಗಣಿಸಿದ್ದೇನೆ. ದೇವರ ವಿಷಯವು ಮನುಷ್ಯಪ್ರಾಣಿಗೆ ಎಂದೂ ತಿಳಿದಿಲ್ಲ, ತಿಳಿಯುವದೂ ಇಲ್ಲ, ಎಂದೇ ನನ್ನ ತಿಳಿವಳಿಕೆ. ಈ ಸಂಗತಿಯು ಎಂತಹ ಜ್ಞಾನಿಗಳಾದರೂ ಅವರವರ ಬುದ್ಧಿ ಮತ್ತು ಭಾವನೆಗಳಂತೆಯೇ ವೇದ್ಯವಾಗತಕ್ಕದ್ದಾಗಿದೆ.

---

* ಮಂಜಪ್ಪನವರು ೧೯೩೭ ರಲ್ಲಿ ಬರೆದು ಪ್ರಕಟಿಸಿದ 'ನನ್ನ ಕಾಣಿಕೆ' ಎಂಬ ಪುಸ್ತಕದಿಂದ ಉದ್ಧರಿಸಲಾಗಿದೆ.

ಆದಕಾರಣ ಈ ವಿಷಯದಲ್ಲಿ ತಮ್ಮ ಅಭಿಪ್ರಾಯವೆ ಸತ್ಯ ವೆಂದು ವಾದಿಸುವದಾಗಲೀ ಅಥವಾ ಅನ್ಯರೂ ತಿಳಿಯಬೇಕೆಂಬು ದಾಗಲಿ ನನಗೆ ಸಮ್ಮತವಿಲ್ಲ. ಈ ಸಂಗತಿಯ ಸತ್ಯಾಸತ್ಯತೆಗಳನ್ನು ಕುರಿತು ಯೋಚಿಸುವದನ್ನು ನಾನು ಬಿಟ್ಟಿದ್ದೇನೆ. ನಾನು ಈ ವಿಷಯದಲ್ಲಿ ಅಜ್ಞೇಯವಾದಿಯು. ಹರ್ಬರ್ಟ ಸ್ಪೆನ್ಸರರ ಗ್ರಂಥ ಗಳಿಂದ ನನಗೆ ಈ ಅಜ್ಞೇಯವಾದವು ಯುಕ್ತವೆಂದು ತೋರಿತು.

ಭಗವದ್ಗೀತೆ ಮತ್ತು ಬಸವಣ್ಣನವರ ವಚನ ಇವೇ ನನಗೆ ಧಾರ್ಮಿಕ ಮತ್ತು ಸಾಮಾಜಿಕ ವಿಷಯಗಳಲ್ಲಿ ಹೆಚ್ಚು ಒಪ್ಪಿಗೆ ಯಾಗಿರತಕ್ಕ ಗ್ರಂಥಗಳು. ನಾನು ನಿರ್ಧರಿಸಿಕೊಂಡ ಅಭಿಪ್ರಾಯಕ್ಕೆ ಅನುಗುಣವಾದ ಈ ಗ್ರಂಥಗಳಲ್ಲಿಯ ವಾಕ್ಯಗಳನ್ನು ನಾನು ಆಧಾರ ವಾಗಿ ಇಟ್ಟುಕೊಂಡಿದ್ದೇನೆ. ಈ ಅಜ್ಞೇಯ ವಾದವನ್ನೇ ಭಗವ ದ್ಗೀತೆಯ ಈ ಕೆಳಗಿನ ಶ್ಲೋಕವು ಸೂಚಿಸುತ್ತದೆಂದು ನನ್ನ ದೃಢ ನಂಬಿಕೆ.

ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।
ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ
ಸರ್ವಶಃ ॥ ೧೦–೨

**ಅರ್ಥ :—** ದೇವತೆಗಳಾಗಲಿ, ಮಹರ್ಷಿಗಳಾಗಲಿ ನನ್ನ ಉತ್ಪತ್ತಿ ಹೇಗಾಯಿತೆಂಬುದನ್ನು ಅರಿಯರು. ಏಕೆಂದರೆ ಎಲ್ಲ ದೇವತೆಗಳ ಮತ್ತು ಮಹರ್ಷಿಗಳ ಆದಿಕಾರಣನು ನಾನೇ ಆಗಿದ್ದೇನೆ.

ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲ ಸಂಯೋಗಂ ಸ್ವಭಾವಸ್ತು
ಪ್ರವರ್ತತೇ ॥ ೫–೧೪

**ಅರ್ಥ :**—ಜನರ ಕರ್ತೃತ್ವ, ಕರ್ಮ, ಅದರ ಫಲ ಮತ್ತು ಅವುಗಳ ಸಂಯೋಗ ಇವುಗಳನ್ನೆಲ್ಲಾ ದೇವರೇನೂ ಉಂಟು ಮಾಡುವದಿಲ್ಲ. ಪ್ರಕೃತಿಯ ಸ್ವಭಾವದಿಂದಲೇ ಇವೆಲ್ಲ ನಡೆಯುತ್ತವೆ.

ದೇವರು ಮನುಷ್ಯನಿಗಾಗಿ ಕೆಲವು ನಿಯಮಗಳನ್ನು ವೇದಾದಿ ಗ್ರಂಥಗಳಲ್ಲಿ ಹೇಳಿದ್ದಾನೆಂತಲೂ ಅವುಗಳಂತೆ ನಡೆದರೆ ಸುಖ ಮತ್ತು ಸ್ವರ್ಗಗಳು ದೊರೆಯುತ್ತವೆಂತಲೂ ಅವುಗಳಿಗೆ ವಿರೋಧವಾಗಿ ಆಚರಿಸಿದರೆ ದುಃಖ ಮತ್ತು ನರಕ ಸಂಭವಿಸುತ್ತವೆಂತಲೂ ನಾನು ತಿಳಿದಿಲ್ಲ. ಮೇಲಣ ಗೀತಾ ವಾಕ್ಯವು ಇದೇ ಅಭಿಪ್ರಾಯವನ್ನು ಹೇಳುತ್ತದೆಂದೇ ನನ್ನ ತಿಳಿವಳಿಕೆ.

ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿ ಭೋ
ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ
ಮರ್ತ್ಯಲೋಕ
ಆಚಾರವೇ ಸ್ವರ್ಗ ಅನಾಚಾರವೇ ನರಕ
ಕೂಡಲಸಂಗಮದೇವ ನೀವೇ ಪ್ರಮಾಣ.

ಎಂಬ ಬಸವಣ್ಣನವರ ವಚನವು ನನ್ನ ಅಭಿಪ್ರಾಯವನ್ನು ಬಲಪಡಿಸುತ್ತದೆಂದು ನಾನು ತಿಳಿದಿದ್ದೇನೆ.

ನನ್ನ ವಿಚಾರವು ಹೀಗಿದ್ದ ಮೇಲೆ ನಾನು ಮಾಡುವ ಲಿಂಗ ಪೂಜೆಯು ತೋರಿಕೆಗಾಗಿದೆಯೆಂದೇ ಗ್ರಹಿಕೆಯಾಗಬಹುದು. ಆದರೆ

ಹಾಗೇನೂ ಇಲ್ಲ. ಆ ವಿಚಾರದಲ್ಲಿ ನಾನೊಂದು ತೀರ್ಮಾನಕ್ಕೆ ಬಂದು ಬಿಟ್ಟಿದ್ದೇನೆ. ಲಿಂಗವೆಂದರೆ ನಮಗೆ ತೋರುವ ಈ ವಿಶ್ವದ ಒಂದು ಚಿಹ್ನ. ವಿಶ್ವದ ಅನುಸಂಧಾನವೇ ಲಿಂಗಪೂಜೆ. ಲಿಂಗಮೂಲಕವಾಗಿ ವಿಶ್ವಭಾವನೆಯನ್ನು ಬಲಿಸಿ ಮನಸ್ಸು ಅದರಲ್ಲಿ ಬೆರೆತುಹೋಗುವಂತೆ ಮಾಡುವದೇ ಲಿಂಗಪೂಜೆಯ ಫಲ.

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ
ನಿಮ್ಮ ಶ್ರೀಚರಣ ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮಕುಟ
ಅಗಮ್ಯ, ಅಪ್ರಮಾಣ, ಅಗೋಚರ, ಅಪ್ರತಿಮ ಲಿಂಗವೇ,
ಕೂಡಲಸಂಗಮದೇವಯ್ಯ ಎನ್ನ ಕರಸ್ಥಳಕ್ಕೆ ಬಂದು
ಚುಳುಕಾದಿರಯ್ಯ.

ಎಂಬ ಬಸವಣ್ಣನವರ ವಚನವು ನನ್ನ ಲಿಂಗಪೂಜೆಯ ಗುಟ್ಟು. ಈ ಕೆಳಗಿನ ವಚನವು ಲಿಂಗಪೂಜೆಯ ಫಲವನ್ನು ಸೂಚಿಸುವದೆಂದು ನನ್ನ ತಿಳಿವಳಿಕೆ.

ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯ, ನಿನ್ನ
ಸುತ್ತಿಪ್ಪುದು
ಎನ್ನ ಮನ ನೋಡಯ್ಯ. ಜಗಕೆ ಬಲ್ಲಿದ ನೀನು, ಆನು ನಿನಗೆ
ಬಲ್ಲಿದನು ಕಂಡಯ್ಯ. ಕರಿಯು ಕನ್ನಡಿಯೊಳಡಗಿದಂತಯ್ಯ
ಎನ್ನೊಳಗೆ
ನೀನಡಗಿದೆ ಕೂಡಲಸಂಗಮದೇವಾ.

ಮಹಾ ಶರಣರಾಗಿದ್ದ ಕಡಕೋಳ ಮಡಿವಾಳಪ್ಪನವರು ಹಾಡಿದ ಈ ಕೆಳಗಿನ ಪದ್ಯ ನನ್ನ ಪೂಜೆಗೆ ಬಹು ಪ್ರಿಯವಾದುದು.

ತನ್ನ ತಾ ತಿಳಿದ ಮೇಲೆ । ಇನ್ನೇನಿನ್ನೇನು ? ।
ತನ್ನಂತೆ ತಾ ಸರ್ವವು ಜೀವ । ಮನ್ನಿಸಿ ಮೂಕಾದ ಮೇಲೆ ॥
ತಾನೆ ಪೃಥ್ವಿ, ಅಪ್ಪು, ತೇಜ । ತಾನೇ ವಾಯು ಆಕಾಶಾತ್ಮ ।
ತಾನೇ ಸೂರ್ಯ, ಚಂದ್ರ, ತಾರೆ । ತಾನೇ ಬ್ರಹ್ಮಾಂಡಾದ
ಮೇಲೆ ॥

ನಿರ್ವಿಷಯಿಯಾದ ಜೀವವು ದೇಹವನ್ನು ಬಿಟ್ಟೊಡನೆಯೇ ವಿಶ್ವದಲ್ಲಿ ಬೆರೆತು ಹೋಗುವದು. ವಿಶ್ವತತ್ವಗಳಲ್ಲಿ ಜೀವವು ಹಾಗೆ ಬೆರೆಯುವದಕ್ಕೆ ಮನಸ್ಸು ವಿಶ್ವಾನುಸಂಧಾನದಲ್ಲಿಯೇ ನಿರತವಾಗ ಬೇಕು. ಬಸವಾದಿ ಶಿವಶರಣರು ಇದೇ ತತ್ವವನ್ನು ಬೋಧಿಸಿದ್ದಾರೆಂದು ನನ್ನ ತಿಳಿವಳಿಕೆ. ಲಿಂಗಾಯತ ಮತತತ್ವದಂತೆ ನಡೆದವರಿಗೆ ಪುನರ್ಜನ್ಮವಿಲ್ಲವೆಂದು ಹೇಳುತ್ತಿರುವದರ ಅಭಿಪ್ರಾಯವು ಹೀಗೆಂದೇ ನನ್ನ ಗ್ರಹಿಕೆ. ಬಸವಣ್ಣನವರ ಈ ಕೆಳಗಿನ ವಚನವು ಪುನರ್ಜನ್ಮದ ನನ್ನ ತಿಳುವಳಿಕೆಯನ್ನು ದೃಢಗೊಳಿಸಿತು.

ದೇವಲೋಕ ಮರ್ತ್ಯಲೋಕವೆಂಬ
ಸೀಮೆಯುಳ್ಳನ್ನಕ್ಕ ಕೇವಲ ಶರಣಾಗಲರಿಯೆ
ಸತ್ತು ಬೆರೆಸಿಹೆನೆಂದರೆ ಕಬ್ಬಿನ ತುದಿಯ ಮೆಲಿದಂತೆ
ಕೂಡಲ ಸಂಗಮದೇವ.

ಅಪ್ರತ್ಯಕ್ಷವಾದ ಈ ಧಾರ್ಮಿಕ ಸಂಗತಿಗಳೆಲ್ಲಾ ವೈಯಕ್ತಿಕವಾದವು ಗಳೆಂದೇ ನನ್ನ ತಿಳಿವಳಿಕೆ. ಆಯಾಯ ವ್ಯಕ್ತಿಗಳ ಬುದ್ಧಿ,

ಭಾವನೆ, ಮನಸ್ಸಿನ ಮೇಲಾದ ಸಂಸ್ಕಾರಗಳಿಗೆ ಸಂಬಂಧವಾಗಿವೆ. ಆದಕಾರಣ ಇವುಗಳ ವಿಷಯದಲ್ಲಿ ಹೀಗೆಯೇ ತಿಳಿಯಬೇಕೆಂದು ಆಗ್ರಹಮಾಡದೆ ಪರರ ಧಾರ್ಮಿಕ ಆಚಾರ ವಿಚಾರಗಳ ವಿಷಯದಲ್ಲಿ ಸಹಿಷ್ಣುತೆಯಿರಬೇಕಾದುದು ಅತ್ಯಗತ್ಯವೆಂದೇ ನಾನು ತಿಳಿದಿದ್ದೇನೆ. ಆದರೆ ಯಾವುದೊಂದು ವ್ಯಕ್ತಿಯ ಧಾರ್ಮಿಕ ಭಾವನೆ ಮತ್ತು ಆಚಾರ-ವಿಚಾರಗಳು ಅನ್ಯರಿಗಾಗಲಿ ಅಥವಾ ಅನ್ಯ ಪ್ರಾಣಿಗಳಿಗಾಗಲಿ ಯಾವ ವಿಧವಾದ ತೊಂದರೆಯನ್ನು ಮಾತ್ರ ಉಂಟು ಮಾಡಕೂಡದು.

**ಸಾಮಾಜಿಕ:—** ಮನುಷ್ಯನಿಗೆ ಜಗತ್ತಿನ ಎಲ್ಲ ಸುಖ-ಸೌಲಭ್ಯಗಳನ್ನೂ ಅನುಭವಿಸಲು ಸಮಾನವಾದ ಅಧಿಕಾರವಿರಬೇಕು. ದೇಶ, ಜಾತಿ, ಮತ, ಪಂಥಗಳ ವ್ಯತ್ಯಾಸಗಳಿಂದ ಆತನು ಜನಾಂಗದಲ್ಲಿ ವಾಸಿಸಲು ಹೆಚ್ಚು-ಕಡಿಮೆ ಅಧಿಕಾರಗಳುಳ್ಳವನಾಗಬಾರದು. ಸ್ತ್ರೀ-ಪುರುಷರಲ್ಲಿ ಸಮಾನವಾದ ಧಾರ್ಮಿಕ-ಸಾಮಾಜಿಕ ಸ್ವಾತಂತ್ರ್ಯಗಳಿರಬೇಕು. ಜನ್ಮದಿಂದ ಒಂದು ವ್ಯಕ್ತಿ ಮೇಲು, ಇನ್ನೊಂದು ಕೀಳೆಂದು ತಿಳಿಯಕೂಡದು. ಹಿಂದುಗಳಲ್ಲಿರುವ ಜನ್ಮವಿಶಿಷ್ಟ ಜಾತಿಗಳಾಗಲಿ, ಬ್ರಾಹ್ಮಣಾದಿ ವರ್ಣಗಳಾಗಲಿ. ಸಮಂಜಸವಾದವುಗಳಲ್ಲ. ಅವು ಜನಾಂಗಕ್ಕೆ ಹಿತಕರವೂ ಅಲ್ಲ. ಭಗವದ್ಗೀತೆಯಲ್ಲಿರುವ ಚತುರ್ವರ್ಣಗಳ ಕಲ್ಪನೆಯು ನನಗೆ ಮಾನ್ಯವಿಲ್ಲ. ಬಸವಣ್ಣನವರು ವರ್ಣಗಳನ್ನು ತೆಗೆದುಹಾಕಿದುದು ಮಹಾಕಾರ್ಯವೆಂದೇ ನನ್ನ ನಂಬಿಕೆ.

ಅಂತೆಯೇ ಬಸವಣ್ಣನವರ ಈ ಕೆಳಗಿನ ವಚನವು ಸಾಮಾಜಿಕ ವಿಷಯದಲ್ಲಿ ಬಹು ಮಹತ್ವದ್ದೆಂದೂ ಅಮರವಾದುದೆಂದೂ ನನ್ನ ಭಾವನೆ.

ಅಪ್ಪನು ನಮ್ಮ ಮಾದಾರ ಚೆನ್ನಯ್ಯ.
ಬೊಪ್ಪನು ನಮ್ಮ ಡೋಹರ ಕಕ್ಕಯ್ಯ.
ಚಿಕ್ಕಯ್ಯ ನಮ್ಮಯ್ಯ ಕಾಣಿರಯ್ಯ.
ಅಣ್ಣನು ನಮ್ಮ ಕಿನ್ನರಿಯ ಬೊಮ್ಮಯ್ಯ.
ಎನ್ನನೇಕರಿಯಿರೇ ಕೂಡಲಸಂಗಮದೇವ ?

ಹಿಂದು ಜನಾಂಗದ ಮತ್ತು ಹಿಂದುಸ್ಥಾನದ ಈಗಿನ ಶೋಚನೀಯ ಸ್ಥಿತಿಗಳಿಗೆ ಹಿಂದು ಸಮಾಜದಲ್ಲಿರುವ ವರ್ಣಕಲ್ಪನೆ ಮತ್ತು ಜಾತಿಗಳು ಮುಖ್ಯ ಕಾರಣವಾಗಿವೆ. ಇವು ಅಳಿದು ಹೋಗಬೇಕು. ಹಾಗಾಗಲು ಜನರಲ್ಲಿ ವಿಚಾರ ಕ್ರಾಂತಿಯನ್ನುಂಟು ಮಾಡುವುದೇ ಮುಖ್ಯ ಪ್ರಯತ್ನ. ಒಂದೊಂದು ಜಾತಿ–ಮತಗಳಲ್ಲಿರುವ ಒಳಭೇದಗಳನ್ನು ಮೊದಲು ಕಳೆಯುವದು ಹೆಚ್ಚು ಅನುಕೂಲ. ಊಟೋಪಚಾರ ಮತ್ತು ಶರೀರ ಸಂಬಂಧಗಳು ಐಚ್ಛಿಕ ವಿಷಯಗಳಾಗಿರಬೇಕು. ಆದರೆ ಅವು ಶಾರೀರಿಕ–ಮಾನಸಿಕ ಉನ್ನತಿಗಳಿಗೆ ವಿಘಾತಕವಾದವುಗಳು ಮಾತ್ರ ಇರಕೂಡದು. ಇದೇ ಆಚಾರದ ಗುಟ್ಟು.

**ನೈತಿಕ :—** ಮನುಷ್ಯನು ಜನಾಂಗದಲ್ಲಿ ಸುಖ–ಶಾಂತಿಗಳಿಂದ ಜೀವಿಸಲು ಅವಶ್ಯಕವಾಗಿರತಕ್ಕ ನಡವಳಿಕೆಗಳೆಲ್ಲಾ ನೀತಿಗೆ ಸಂಬಂಧಪಟ್ಟಿವೆ. ಇವುಗಳಲ್ಲಿ ದಯವೇ ಮುಖ್ಯವೆಂದು ನನ್ನ ತಿಳಿವಳಿಕೆ. ಅಂತೆಯೇ ಬಸವಣ್ಣನವರ ಈ ಕೆಳಗಿನ ವಚನ ನನಗೆ ಬಹು ಮಾನ್ಯವಾದುದು.

ದಯವಿಲ್ಲದ ಧರ್ಮವಾವುದಯ್ಯ.
ದಯವಿರಬೇಕು ಸಕಲ ಪ್ರಾಣಿಗಳಲ್ಲಿ.

ದಯವೇ ಧರ್ಮದ ಮೂಲವಯ್ಯ
ಕೂಡಲಸಂಗಯ್ಯನಂತಲ್ಲದೊಲ್ಲನಯ್ಯ.

ಮನುಷ್ಯನು ಜನಾಂಗದ ಹಿತಕ್ಕಾಗಿ ತನ್ನ ಸ್ವಭಾವಕ್ಕನುಗುಣವಾದ ಕಾರ್ಯವನ್ನು ಸತ್ಯತೆಯಿಂದಲೂ ಧೈರ್ಯದಿಂದಲೂ ನಿರಂತರ ಮಾಡುತ್ತಿರಬೇಕು. ಇದೇ ನೈತಿಕ ಬಲವಿದ್ದುದರ ಲಕ್ಷಣ. ಇದರ ಮೇಲಿಂದಲೇ ಮನುಷ್ಯನ ಶ್ರೇಷ್ಠತೆಯನ್ನು ಗುರ್ತಿಸಬೇಕು. ಧಾರ್ಮಿಕ ಉಪಾಸನೆ, ಧ್ಯಾನ, ಪ್ರಾರ್ಥನೆಗಳು ಈ ತನ್ನ ಕರ್ತವ್ಯಕ್ಕೆ ಬಲವನ್ನೂ ಉತ್ಸಾಹವನ್ನೂ ಉಂಟುಮಾಡುವಂತಿರಬೇಕು.

ಭಗವದ್ಗೀತೆಯಲ್ಲಿಯ ಈ ಕೆಳಗಿನ ಶ್ಲೋಕವು ನನಗೆ ಈ ವಿಷಯದಲ್ಲಿ ಮಾರ್ಗದರ್ಶಿ.

ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।
ಸರ್ವಾರಂಭಾ ಹಿ ದೋಷೇಣ
ಧೂಮೇನಾಗ್ನಿರಿವಾವೃತಾಃ ॥ ೧೮–೪೮

**ಅರ್ಥ :—** ಸ್ವಭಾವ ಸಿದ್ಧವಾದ ಕರ್ಮವು ಸದೋಷವಿದ್ದರೂ ಅದು ತ್ಯಾಜ್ಯವಾದುದಲ್ಲ. ಏಕೆಂದರೆ ಬೆಂಕಿಯು ಹೊಗೆಯಿಂದ ವ್ಯಾಪಿಸಿರುವಂತೆ ಎಲ್ಲ ಕರ್ಮಗಳೂ ದೋಷಯುಕ್ತವಾದವುಗಳಾಗಿಯೇ ಇವೆ.

ಆದಕಾರಣ ಜನರ ಮೆಚ್ಚಿಗೆಯ ಕಾರ್ಯಗಳನ್ನು ಕೈಕೊಳ್ಳದೇ ತನ್ನ ಗುಣ-ಸ್ವಭಾವಗಳಿಗೆ ವಿಹಿತವಾಗಿರತಕ್ಕ ಕಾರ್ಯಗಳನ್ನೇ ಮಾಡಬೇಕು. ತನಗಾಗಿ ಕಾರ್ಯಗಳಿವೆಯೇವಿನಾ ಕಾರ್ಯ

ಗಳಿಗಾಗಿ ತಾನಿಲ್ಲವೆಂಬ ಹರ್ಬರ್ಟ್ ಸ್ಪೆನ್ಸರರ ವಾಕ್ಯವು ಎಂದೋ ನನಗೆ ಬಹು ಮೆಚ್ಚಿಗೆಯಾಗಿದೆ.

ನನಗೆ ಸತ್ಯವೆಂದು ತೋರಿದ ನನ್ನ ಸ್ವಭಾವಕ್ಕನುಗುಣ ವಾದ ಕಾರ್ಯಗಳನ್ನು ನಿರ್ದಾಕ್ಷಿಣ್ಯವಾಗಿ ಮಾಡುವದರ ಕಡೆಗೇ ನನ್ನ ಒಲವು. ಅದರಿಂದ ಅನೇಕ ಸಾರೆ ನನ್ನ ಆಪ್ತರೂ ವಿರೋಧ ಮಾಡಿದುದುಂಟು. ನನ್ನ ಕಾರ್ಯದಲ್ಲಿ ಬಸವಣ್ಣನವರ ಈ ಕೆಳಗಿನ ಎರಡು ವಚನಗಳು ಉತ್ಸಾಹವನ್ನೂ ಸಾಹಸವನ್ನೂ ಉಂಟು ಮಾಡತಕ್ಕವುಗಳಾಗಿವೆ. ಆದುದರಿಂದ ಇವುಗಳಲ್ಲಿ ಮೊದಲನೆಯ ದನ್ನು ನಾನು ನನ್ನ **"ಶರಣ ಸಂದೇಶ"** ಪತ್ರಿಕೆಯ ಶಿರೋ ಭಾಗದಲ್ಲಿಟ್ಟುಕೊಂಡಿದ್ದೇನೆ.

ನ್ಯಾಯನಿಷ್ಠುರ ದಾಕ್ಷಿಣ್ಯಪರ ನಾನಲ್ಲ
ಲೋಕವಿರೋಧಿ ಶರಣನಾರಿಗೂ ಅಂಜುವವನಲ್ಲ
ಕೂಡಲಸಂಗಮದೇವರ ರಾಜತೇಜದೊಳಿಪ್ಪನಾಗಿ.

ಜೋಳವಾಳಿಯುವ ನಾನಲ್ಲಯ್ಯ
ವೇಳೆಯಾಳಿಯುವ ನಾನಲ್ಲಯ್ಯ,
ಹಾಳುಗೆಟ್ಟೋಡುವ ಆಳು ನಾನಲ್ಲಯ್ಯ,
ಕೇಳು ಕೂಡಲಸಂಗಮದೇವ, ಮರಣವೇ ಮಹಾನವಮಿ.

ಇಂಥ ದಯೆ, ಸತ್ಯ ಧೈರ್ಯಗಳಿಂದ ತನ್ನ ಸ್ವಭಾವಕ್ಕನುಗುಣ ವಾದ ಕಾರ್ಯಗಳನ್ನು ನಿರಪೇಕ್ಷ ಬುದ್ಧಿಯಿಂದ ಮಾಡುತ್ತ ಹೋದರೆ ಅದರಲ್ಲಿಯೇ ಎಲ್ಲ ಧರ್ಮ, ಸ್ವರ್ಗ, ಮೋಕ್ಷಾದಿಗಳಿವೆ ಯೆಂದು ನನ್ನ ನಂಬಿಕೆ. ಭಗವದ್ಗೀತೆಯು ಇದಕ್ಕೇನೇ ಕರ್ಮ

ಯೋಗವೆಂದೂ ಬಸವಾದಿ ಶಿವಶರಣರು ಅರ್ಪಣಯೋಗವೆಂದೂ ಹೇಳಿದ್ದಾರೆಂದು ನನ್ನ ಗ್ರಹಿಕೆ.

ದೇವರು ಮನುಷ್ಯರೂಪದಲ್ಲಿ ಅವತಾರ ಮಾಡುತ್ತಾನೆಂದಾಗಲೀ ಅಥವಾ ಆತನು ತನ್ನ ದೂತರನ್ನು ಕಳುಹಿಸುತ್ತಾನೆಂದಾಗಲೀ, ಅನೇಕರು ತಿಳಿದಿರುವದು ನನಗೆ ಒಪ್ಪಿಗೆಯಿಲ್ಲ. ದೇವರಿಂದ ಯಾವ ಧರ್ಮಗ್ರಂಥಗಳೂ ಉಂಟಾಗುವದಿಲ್ಲ; ಎಲ್ಲವೂ ಮನುಷ್ಯರಿಂದಲೇ ಉಂಟಾಗತಕ್ಕವು. ಆದರೆ ಅವರು ಮಹಾ ಪುರುಷರಿರಬಹುದು. ಎಂತಹ ಮಹಾಪುರುಷರಿದ್ದರೂ ಅವರ ಎಲ್ಲಾ ವಿಚಾರಗಳೂ ಎಲ್ಲಾ ಕಾಲಗಳಲ್ಲಿ ಎಲ್ಲರಿಗೂ ಹಿತಕರವಾಗಿಯೇ ಇರುತ್ತವೆಂದು ನಾನು ತಿಳಿದಿಲ್ಲ. ಯಾವದೊಂದು ಗ್ರಂಥದ ಅಥವಾ ಒಬ್ಬ ಮಹಾ ವಿಭೂತಿಯ ಎಲ್ಲಾ ವಿಚಾರಗಳೂ ನನಗೆ ಮಾನ್ಯವಾಗಿಯೂ ಇಲ್ಲ. ಉತ್ಕ್ರಾಂತವಾದವೇ ನನಗೆ ಒಪ್ಪಿಗೆ. ಈ ಪ್ರಕಾರ ಧಾರ್ಮಿಕ, ಸಾಮಾಜಿಕ ಮತ್ತು ನೈತಿಕ ವಿಷಯಗಳಲ್ಲಿ ನನ್ನ ವಿಚಾರಗಳಿವೆ; ಇವುಗಳಂತೆಯೇ ನಾನು ನಡೆಯುತ್ತಲೇ ಇದ್ದೇನೆಂದಲ್ಲ. ಆದರೆ ಹೀಗೆಯೇ ನಡೆಯಬೇಕೆಂದು ನಿರ್ಧರಿಸಿ ಪ್ರಯತ್ನಿಸುತ್ತಿರುವ ಒಬ್ಬ ಸಾಧಕನು.

**ರಾಜಕೀಯ ವಿಷಯ:**—ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವನ್ನುಂಟುಮಾಡಿಕೊಳ್ಳುವದೇ ಈ ದೇಶದ ಈಗಿನ ರಾಜಕಾರಣದಲ್ಲಿಯ ಮುಖ್ಯ ಕಾರ್ಯ. ಈ ಕಾರ್ಯವನ್ನು ಮಹಾತ್ಮಾ ಗಾಂಧಿಯವರು ಬೋಧಿಸಿರುವ ಅಹಿಂಸಾ ಮಾರ್ಗದಿಂದಲೇ ಸಾಧಿಸಿಕೊಳ್ಳಬೇಕೆಂಬುದು ನನಗೆ ಒಪ್ಪಿಗೆ. ನಾನು ಕಳೆದ ಮೂವತ್ತು ವರುಷಗಳಿಂದಲೂ ಕೀರ್ತಿಶೇಷ ಗೋಖಲೆ ಮತ್ತು

ಟಿಳಕರ ರಾಜಕಾರಣಗಳನ್ನು ಪ್ರದರ್ಶಿಸುವ 'ಜ್ಞಾನಪ್ರಕಾಶ' ಮತ್ತು "ಕೇಸರೀ" ಪತ್ರಿಕೆಗಳನ್ನು ಓದುತ್ತಿದ್ದೇನೆ. ಇವೆರಡೂ ಭಿನ್ನಭಿನ್ನ ವಿಚಾರಸರಣಿಯ ಪತ್ರಿಕೆಗಳು. ಇವೆರಡನ್ನೂ ಓದದೇ ಬೇರೆ ಯಾವ ಪತ್ರಿಕೆಗಳನ್ನು ಓದಿದರೂ ನನಗೆ ಸಮಾಧಾನ ವಾಗುವದಿಲ್ಲ.

ಗಾಂಧೀಜಿಯವರ ರಾಜಕಾರಣವು ಆ ಉಭಯ ವಿಭೂತಿ ಗಳ ತತ್ವಗಳಿಂದಲೂ ಕೂಡಿರುವದಲ್ಲದೇ ಸತ್ಯಾಗ್ರಹವೆಂಬ ಶ್ರೇಷ್ಠ ತತ್ವವಿಶಿಷ್ಟವಾದುದಾಗಿದೆಯೆಂದೂ ನನ್ನ ಗ್ರಹಿಕೆ.

ಆ ಉಭಯ ವಿಭೂತಿಗಳು ರಾಜಕಾರಣವನ್ನೇ ಮುಖ್ಯ ವಾಗಿಟ್ಟುಕೊಂಡಿದ್ದರು. ಆದರೆ ಗಾಂಧೀಜಿಯವರು ಜನಾಂಗದ ಉನ್ನತಿಯ ಎಲ್ಲ ರೀತಿಗಳಲ್ಲಿಯೂ ಅತ್ಯದ್ಭುತವಾದ ಕ್ರಾಂತಿ ಯನ್ನುಂಟು ಮಾಡಿದರು. ಇವರು ಯುಗಪುರುಷರೆಂದೇ ನನ್ನ ತಿಳಿವಳಿಕೆ. ಈಗ ಪ್ರಪಂಚಕ್ಕೇನೇ ಒಂದು ಮಾರ್ಗವನ್ನು ತೋರಿ ಸುವ ಮಹಾವಿಭೂತಿಗಳು.

ಹೀಗಿದ್ದರೂ ಇವರ ಎಲ್ಲಾ ವಿಚಾರಗಳನ್ನೂ ಅನುಸರಿಸಲು ನನಗೆ ಇಷ್ಟವಿಲ್ಲ. ಗಾಂಧೀಜಿಯವರ ಚತುರ್ವರ್ಣಗಳ ವಿಚಾರ ಸರಣಿ ನನಗೆ ಒಪ್ಪಿಗೆ ಇಲ್ಲ. ಈ ದೇಶದ ರಾಜಕಾರಣಕ್ಕೆ ಹಿಂದು ಸಮಾಜದಲ್ಲಿರುವ ವರ್ಣಗಳ ಕಲ್ಪನೆಯೂ ಸಂಬಂಧಪಟ್ಟಿದೆ ಯೆಂದೂ ಇದು ನಿವಾರಣೆಯಾಗಿ ಒಂದು ಸಂಘಟನೆಯಾಗುವುದು ಹಿಂದುಸ್ಥಾನದ ರಾಜಕೀಯ ಉನ್ನತಿಗೆ ಬಹು ಸಹಾಯಕವೆಂದೂ ನನ್ನ ಅಭಿಪ್ರಾಯ.

ಯೋಗವೆಂದೂ ಬಸವಾದಿ ಶಿವಶರಣರು ಅರ್ಪಣಯೋಗವೆಂದೂ ಹೇಳಿದ್ದಾರೆಂದು ನನ್ನ ಗ್ರಹಿಕೆ.

ದೇವರು ಮನುಷ್ಯರೂಪದಲ್ಲಿ ಅವತಾರ ಮಾಡುತ್ತಾನೆಂದಾಗಲೀ ಅಥವಾ ಆತನು ತನ್ನ ದೂತರನ್ನು ಕಳುಹಿಸುತ್ತಾನೆಂದಾಗಲೀ, ಅನೇಕರು ತಿಳಿದಿರುವದು ನನಗೆ ಒಪ್ಪಿಗೆಯಿಲ್ಲ. ದೇವರಿಂದ ಯಾವ ಧರ್ಮಗ್ರಂಥಗಳೂ ಉಂಟಾಗುವದಿಲ್ಲ; ಎಲ್ಲವೂ ಮನುಷ್ಯರಿಂದಲೇ ಉಂಟಾಗತಕ್ಕವು. ಆದರೆ ಅವರು ಮಹಾ ಪುರುಷರಿರಬಹುದು. ಎಂತಹ ಮಹಾಪುರುಷರಿದ್ದರೂ ಅವರ ಎಲ್ಲಾ ವಿಚಾರಗಳೂ ಎಲ್ಲಾ ಕಾಲಗಳಲ್ಲಿ ಎಲ್ಲರಿಗೂ ಹಿತಕರವಾಗಿಯೇ ಇರುತ್ತವೆಂದು ನಾನು ತಿಳಿದಿಲ್ಲ. ಯಾವದೊಂದು ಗ್ರಂಥದ ಅಥವಾ ಒಬ್ಬ ಮಹಾ ವಿಭೂತಿಯ ಎಲ್ಲಾ ವಿಚಾರಗಳೂ ನನಗೆ ಮಾನ್ಯವಾಗಿಯೂ ಇಲ್ಲ. ಉತ್ಕ್ರಾಂತವಾದವೇ ನನಗೆ ಒಪ್ಪಿಗೆ. ಈ ಪ್ರಕಾರ ಧಾರ್ಮಿಕ, ಸಾಮಾಜಿಕ ಮತ್ತು ನೈತಿಕ ವಿಷಯಗಳಲ್ಲಿ ನನ್ನ ವಿಚಾರಗಳಿವೆ; ಇವುಗಳಂತೆಯೇ ನಾನು ನಡೆಯುತ್ತಲೇ ಇದ್ದೇನೆಂದಲ್ಲ. ಆದರೆ ಹೀಗೆಯೇ ನಡೆಯಬೇಕೆಂದು ನಿರ್ಧರಿಸಿ ಪ್ರಯತ್ನಿಸುತ್ತಿರುವ ಒಬ್ಬ ಸಾಧಕನು.

**ರಾಜಕೀಯ ವಿಷಯ:**—ಹಿಂದುಸ್ಥಾನಕ್ಕೆ ಸ್ವಾತಂತ್ರ್ಯವನ್ನುಂಟುಮಾಡಿಕೊಳ್ಳುವದೇ ಈ ದೇಶದ ಈಗಿನ ರಾಜಕಾರಣದಲ್ಲಿಯ ಮುಖ್ಯ ಕಾರ್ಯ. ಈ ಕಾರ್ಯವನ್ನು ಮಹಾತ್ಮಾ ಗಾಂಧಿಯವರು ಬೋಧಿಸಿರುವ ಅಹಿಂಸಾ ಮಾರ್ಗದಿಂದಲೇ ಸಾಧಿಸಿಕೊಳ್ಳಬೇಕೆಂಬುದು ನನಗೆ ಒಪ್ಪಿಗೆ. ನಾನು ಕಳೆದ ಮೂವತ್ತು ವರುಷಗಳಿಂದಲೂ ಕೀರ್ತಿಶೇಷ ಗೋಖಲೆ ಮತ್ತು

ಟಿಳಕರ ರಾಜಕಾರಣಗಳನ್ನು ಪ್ರದರ್ಶಿಸುವ 'ಜ್ಞಾನಪ್ರಕಾಶ' ಮತ್ತು "ಕೇಸರೀ" ಪತ್ರಿಕೆಗಳನ್ನು ಓದುತ್ತಿದ್ದೇನೆ. ಇವೆರಡೂ ಭಿನ್ನಭಿನ್ನ ವಿಚಾರಸರಣಿಯ ಪತ್ರಿಕೆಗಳು. ಇವೆರಡನ್ನೂ ಓದದೇ ಬೇರೆ ಯಾವ ಪತ್ರಿಕೆಗಳನ್ನು ಓದಿದರೂ ನನಗೆ ಸಮಾಧಾನ ವಾಗುವದಿಲ್ಲ.

ಗಾಂಧೀಜಿಯವರ ರಾಜಕಾರಣವು ಆ ಉಭಯ ವಿಭೂತಿಗಳ ತತ್ವಗಳಿಂದಲೂ ಕೂಡಿರುವದಲ್ಲದೇ ಸತ್ಯಾಗ್ರಹವೆಂಬ ಶ್ರೇಷ್ಠ ತತ್ವವಿಶಿಷ್ಟವಾದುದಾಗಿದೆಯೆಂದೂ ನನ್ನ ಗ್ರಹಿಕೆ.

ಆ ಉಭಯ ವಿಭೂತಿಗಳು ರಾಜಕಾರಣವನ್ನೇ ಮುಖ್ಯವಾಗಿಟ್ಟುಕೊಂಡಿದ್ದರು. ಆದರೆ ಗಾಂಧೀಜಿಯವರು ಜನಾಂಗದ ಉನ್ನತಿಯ ಎಲ್ಲ ರೀತಿಗಳಲ್ಲಿಯೂ ಅತ್ಯದ್ಭುತವಾದ ಕ್ರಾಂತಿಯನ್ನುಂಟು ಮಾಡಿದರು. ಇವರು ಯುಗಪುರುಷರೆಂದೇ ನನ್ನ ತಿಳಿವಳಿಕೆ. ಈಗ ಪ್ರಪಂಚಕ್ಕೇನೇ ಒಂದು ಮಾರ್ಗವನ್ನು ತೋರಿಸುವ ಮಹಾವಿಭೂತಿಗಳು.

ಹೀಗಿದ್ದರೂ ಇವರ ಎಲ್ಲಾ ವಿಚಾರಗಳನ್ನೂ ಅನುಸರಿಸಲು ನನಗೆ ಇಷ್ಟವಿಲ್ಲ. ಗಾಂಧೀಜಿಯವರ ಚತುರ್ವರ್ಣಗಳ ವಿಚಾರ ಸರಣಿ ನನಗೆ ಒಪ್ಪಿಗೆ ಇಲ್ಲ. ಈ ದೇಶದ ರಾಜಕಾರಣಕ್ಕೆ ಹಿಂದು ಸಮಾಜದಲ್ಲಿರುವ ವರ್ಣಗಳ ಕಲ್ಪನೆಯೂ ಸಂಬಂಧಪಟ್ಟಿದೆಯೆಂದೂ ಇದು ನಿವಾರಣೆಯಾಗಿ ಒಂದು ಸಂಘಟನೆಯಾಗುವುದು ಹಿಂದುಸ್ಥಾನದ ರಾಜಕೀಯ ಉನ್ನತಿಗೆ ಬಹು ಸಹಾಯಕವೆಂದೂ ನನ್ನ ಅಭಿಪ್ರಾಯ.

ಮುಸಲ್ಮಾನ ಧರ್ಮವು ಹಿಂದೂ ಮತ್ತು ಕ್ರೈಸ್ತ ಧರ್ಮಗಳಂತೆ ಪರಧರ್ಮ ಸಹಿಷ್ಣುತೆಯ ಪ್ರವೃತ್ತಿಯುಳ್ಳದ್ದಾಗಿಲ್ಲ. ಅದರಲ್ಲಿ ಆಕ್ರಮಣ ಪ್ರವೃತ್ತಿ ಹೆಚ್ಚು. ಅಂತೆಯೇ ಅದು ನನಗೆ ಸೇರುವದಿಲ್ಲ. ಮುಸಲ್ಮಾನ ಜನಾಂಗದಲ್ಲಿ ಸ್ವದೇಶಕ್ಕಿಂತ ಸ್ವಧರ್ಮದ ಅಭಿಮಾನ ಅತ್ಯಧಿಕ. ಏಶಿಯಾ ಖಂಡದಲ್ಲಿ ಆ ಧರ್ಮದವರ ಸ್ವತಂತ್ರ ರಾಷ್ಟ್ರಗಳಿವೆ. ಆದಕಾರಣ ಮುಸಲ್ಮಾನ ಸಮಾಜಕ್ಕೆ ಈ ದೇಶದಲ್ಲಿ ತನ್ನ ಪ್ರಭುತ್ವ ಸ್ಥಾಪಿಸುವ ಕಲ್ಪನೆ ಆಗಾಗ್ಗೆ ಉಂಟಾಗಬಹುದು. ಹಿಂದುಸ್ಥಾನದಲ್ಲಿ ಮುಸಲ್ಮಾನ ಸಮಾಜವು ಮೂರನೇ ಒಂದು ಭಾಗದಷ್ಟು ದೊಡ್ಡದಾಗಿರುವದರಿಂದಲೂ ಜನಸಂಖ್ಯೆಯನ್ನು ಹೆಚ್ಚಿಸುವದರ ಕಡೆಗೆ ಸ್ವಾಭಾವಿಕವಾಗಿಯೇ ಅದರ ಪ್ರವೃತ್ತಿ ಇರುವದರಿಂದಲೂ ಈ ದೇಶದ ರಾಜಕೀಯ ಶಾಂತತೆಗೆ ಇದೊಂದು ಲಕ್ಷಿಸಲ್ಪಡತಕ್ಕ ಸಂಗತಿಯೇ ಸರಿ.

ಆದಕಾರಣ ಹಿಂದು ಶುದ್ಧಿ ಮತ್ತು ಸಂಘಟನೆಗಳು ಈ ದೇಶದ ರಾಜಕಾರಣಕ್ಕೆ ನಿಕಟ ಸಂಬಂಧವಾಗಿವೆಯೆಂದೂ ರಾಜಕಾರಣದಲ್ಲಿರುವವರು ಇದನ್ನು ನಿರ್ಲಕ್ಷಿಸುವದು ಯುಕ್ತವಲ್ಲವೆಂದೂ ನನ್ನ ತಿಳಿವಳಿಕೆ. ಗಾಂಧೀಜಿಯವರು ಈ ವಿಷಯವನ್ನೇನೂ ಲಕ್ಷಿಸುವದಿಲ್ಲವೆಂದೇ ನನ್ನ ಭಾವನೆ.

ಗಾಂಧೀಜಿಯವರು ಪ್ರಾರಂಭಿಸಿದ್ದ ಶಾಸನಭಂಗವು ಒಂದು ಸಿದ್ಧಾಂತವಾಗಿ ತೋರದಿದ್ದುದರಿಂದಲೇ ನಾನು ಅದರಲ್ಲಿ ಸೇರಲಿಲ್ಲ. ನಮಗೆ ಸತ್ಯವೆಂದು ತೋರಿದ ಕಾರ್ಯಗಳನ್ನು ಮಾಡುವಾಗ ಸೆರೆಮನೆಗೆ ಹೋಗುವದು ಬೇರೆ. ಸೆರೆಮನೆಗೆ ಹೋಗುವ-

ದಕ್ಕಾಗಿಯೇ ಒಂದು ಕಾರ್ಯವನ್ನು ಮಾಡುವದು ಬೇರೆ. ಗಾಂಧೀಜಿಯವರು ಪ್ರಾರಂಭಿಸಿದ್ದ ಶಾಸನಭಂಗದ ಚಟುವಟಿಕೆಯು ಎರಡನೆಯ ತರಹದ್ದಾಗಿದ್ದಿತು. ಅಂತೆಯೇ ಅದರಲ್ಲಿ ನಾನು ಸೇರಲಿಲ್ಲ. ಅದೊಂದು ರಾಜಕಾರಣದಲ್ಲಿಯ ಪ್ರಯತ್ನವಾಗಿದ್ದಿತೇ ವಿನಾ ಸತ್ಯಸಿದ್ಧಾಂತವೇನೂ ಆಗಿರಲಿಲ್ಲ. ಹಾಗಾಗಿ-ದ್ದರೆ ಇಂಗ್ಲಿಷ್ ಸರಕಾರದಲ್ಲಿ ಎಷ್ಟು ಅನ್ಯಾಯದ ಶಾಸನಗಳಿವೆಯೆಂದರೆ, ಅವುಗಳ ಉಲ್ಲಂಘನೆಯ ಕಾರ್ಯದಿಂದ ನಾವು ಸೆರೆಮನೆಯ ಹೊರಗೆ ಎಂದೂ ಇರುವದೇ ಶಕ್ಯವಿಲ್ಲ. ಗಾಂಧೀಜಿಯವರು ಹೀಗೆಯೇ ಸತ್ಯಾಗ್ರಹವನ್ನು ಪ್ರಹ್ಲಾದನಂತೆ ಪ್ರಾರಂಭಿಸಿದರೆಂದೂ ಸೆರೆಮನೆಯಲ್ಲಿಯೇ ಇವರ ಅಂತ್ಯವೆಂದೂ ಮೊದಲು ನಾನು ತಿಳಿದೆನು. ಆದರೆ ಕಡೆಗೆ ಇದೊಂದು ಇವರ ರಾಜಕಾರಣದಲ್ಲಿಯ ಪ್ರಯತ್ನವಾಗಿದೆಯೆಂದೇ ಗೊತ್ತಾಯಿತು.

ನಾನು ಕಾಂಗ್ರೆಸ್ಸಿನಲ್ಲಿ ಈ ವರೆಗೂ ಸೇರಿಲ್ಲ. ಏಕೆಂಬುದನ್ನು 'ಸತ್ಯಾಗ್ರಹಧರ್ಮ' ಎಂಬ ಚಿಕ್ಕ ಪುಸ್ತಕದಲ್ಲಿ ೧೯೨೨ ನೆಯ ಇಸವಿಯಲ್ಲಿಯೇ ಈ ಕೆಳಗಿನಂತೆ ಬರೆದು ಪ್ರಕಟಿಸಿದ್ದೇನೆ.

'ರಾಜಕೀಯ, ಸಾಮಾಜಿಕ ಮೊದಲಾದ ಯಾವ ಸಭೆಗಳೇ ಆಗಲಿ, ಅಥವಾ ಸಂಘಗಳೆ ಆಗಲಿ, ಅವು ಬಹುಭಾಗದವರ ಅಭಿಪ್ರಾಯದಂತೆಯೇ ನಡೆಯುತ್ತಿರುತ್ತವೆ. ಅವುಗಳಿಗೆ ಬಹುಮತವೇ ಪ್ರಾಣವು. ಸತ್ಯಾಗ್ರಹ ಧರ್ಮವನ್ನನುಸರಿಸುವವರಿಗಾದರೋ ಸತ್ಯವೇ ಪ್ರಾಣವು. ಆದುದರಿಂದ ನಿಜವಾದ ಸತ್ಯಾಗ್ರಹ ಧರ್ಮಿಯು ಇಂಥ ಬಹುಮತಾನುಗಣ್ಯವಾಗಿ ನಡೆಯುವ ಸಭೆಗಳಲ್ಲಾಗಲಿ, ಸಂಘಗಳಲ್ಲಾಗಲಿ ಸೇರಿ ಅವುಗಳಂತೆ ಆಚರಿಸುವ-

ದಿಲ್ಲ. ಆದರೆ ತಾನು ತನ್ನ ಅಭಿಪ್ರಾಯದಂತೆ ಇಂಥ ಅನೇಕ ಸಭೆಗಳನ್ನೂ ಸಂಘಗಳನ್ನೂ ನಡೆಯಿಸಬಹುದು. ಸತ್ಯಾಗ್ರಹ ಧರ್ಮವನ್ನು ಸರಿಯಾಗಿಯೇ ಆಚರಿಸಬೇಕಾದರೆ ಆರಂಭದಲ್ಲಿ ಇಂಥ ಯಾವ ಸಭೆಗಳಿಗಾಗಲಿ ಅಥವಾ ಸಂಘಗಳಿಗಾಗಲಿ ಸಂಬಂಧ ಪಡದಂತಿರುವದೇ ಯುಕ್ತವೆಂದು ಭಾವಿಸಿದ್ದೇನೆ."

ಗಾಂಧೀಜಿಯವರು ಕಾಂಗ್ರೆಸ್ಸನ್ನು ತಮ್ಮ ಕಡೆ ಮಾಡಿಕೊಂಡಿದ್ದಾರೆಯೇ ವಿನಾ ಕಾಂಗ್ರೆಸ್ಸಿನಂತೆ ಅವರೇನೂ ನಡೆಯುವದಿಲ್ಲವೆಂದೇ ನಾನು ತಿಳಿದಿದ್ದೇನೆ. ಅವರು ಬಹುಮತದಂತೆ ನಡೆಯುವವರಲ್ಲ. ತಮ್ಮ ಇಷ್ಟದಂತೆ ನಡೆಯುವವರು. ಅವರನ್ನೇ ಬಹುಮತವು ಬೇಕಾದರೆ ಅನುಸರಿಸಲಿ; ಇಲ್ಲವೇ ಬಿಡಲಿ.

ನಾನು ಯಾವ ಸಾರ್ವಜನಿಕ ಸಂಸ್ಥೆಗಳಲ್ಲಿಯೂ ಪ್ರಾಯಶಃ ಸೇರುತ್ತಾ ಇಲ್ಲ. ನನಗೆ ವಿಹಿತವಾಗಿ ತೋರಿದಂತೆ ಅದು ನಡೆಯುತ್ತದೆಂದು ಕಂಡರೇನೇ ಅದರಲ್ಲಿ ಸೇರುವದು. ಇಲ್ಲವಾದರೆ ಯಾವುದರಲ್ಲಿಯೂ ಸೇರದಿರುವದು. ವೀರಶೈವ ತತ್ವ ಪ್ರಚಾರಕ ಸಂಘವನ್ನು ಸ್ಥಾಪಿಸಿ ಅದರಲ್ಲಿ ನಾನು ಸೇರಿದ್ದು ಮೇಲಿನ ಉದ್ದೇಶದಂತೆ. ಅದು ಆ ಪ್ರಕಾರವೆ ಆಯಿತು. ವೀರಶೈವ ಮಹಾಸಭೆಯ ಮಧ್ಯವರ್ತಿ ಮಂಡಲದಲ್ಲಿ ಸೇರಬೇಕಾದರೂ ನಾನು ಅದೇ ಪ್ರಕಾರ ಯೋಚಿಸಿದ್ದೆನು. ಅದರಿಂದ ಕಾರ್ಯವೆ ನಡೆಯುವದಿಲ್ಲವೆಂದು ಗೊತ್ತಾದೊಡನೆ ಅದನ್ನು ಬಿಟ್ಟುಬಿಟ್ಟೆನು. ನಾನು ಈಗ ಯಾವ ಸಭೆ ಸಂಘಗಳಿಗೂ ಸದಸ್ಯನಾಗಿಲ್ಲ. ನನಗೆ ವಿಹಿತವೆಂದು ತೋರದಿರುವ ನಿಯಮಗಳನ್ನು ಬಹುಮತಗಳಿಂದಾದವುಗಳೆಂಬ ಕಾರಣದಿಂದ ನಡೆಯುವ ಪ್ರವೃತ್ತಿಯು ನನ್ನದಲ್ಲ.

ಇದೊಂದು ವಿಧವಾದ ಅಹಂಕಾರವೆಂದೇ ಅನ್ಯರಿಗೆ ತೋರಿದರೆ ಅದೇನೂ ತಪ್ಪಲ್ಲ. ನನ್ನ ಸ್ವಭಾವದಿಂದಲೇ ನಾನು ಯಾವ ಸಂಘದಲ್ಲಿಯೂ ಸೇರದಿದ್ದುದು. ಕಾಂಗ್ರೆಸ್ಸಿನಂತಹ ಸಂಸ್ಥೆಯ ಕಾರ್ಯಕಲಾಪಗಳ ಮೇಲೂ ಮಹಾತ್ಮಾ ಗಾಂಧಿ, ಪಂಡಿತ ಜವಾ-ಹರಲಾಲ ನೆಹರೂ ಮೊದಲಾದ ಮಹಾ ವಿಭೂತಿಗಳ ಕೆಲವು ಅಭಿಪ್ರಾಯಗಳ ಮೇಲೂ ಟೀಕೆ ಮಾಡಲು ನನಗೆ ಅಭ್ಯಂತರ ತೋರುವದಿಲ್ಲ. ಈ ಪ್ರಕಾರ ಮಾಡುತ್ತಲೂ ಬಂದಿದ್ದೇನೆ.

ಕ್ರಿ. ಶ. ೧೯೩೪ರಲ್ಲಿ ಕಾಂಗ್ರೆಸ್ಸು ಮುಂಬೈಯಲ್ಲಿ ಕೂಡಿದಾಗ ಅದು ಜಾತಿನಿರ್ಣಯದ ವಿಷಯಕ್ಕೆ ಅನುಸರಿಸಿದ ಧೋರಣವನ್ನು ಮತ್ತು ೧೯೩೭ರಲ್ಲಿ ಮೊದಲು ಅದು ಅಧಿಕಾರ ಸ್ವೀಕರಿಸದಿದ್ದುದನ್ನು ನಾನು ಖಂಡತುಂಡಾಗಿ ಟೀಕಿಸಿದ್ದೇನೆ. ರಾಜಕಾರಣದಲ್ಲಿ ಕಾಂಗ್ರೆಸ್ಸೇ ಮುಖ್ಯ ಸಂಸ್ಥೆಯು. ಇದನ್ನೇ ಎಲ್ಲರೂ ಸೇರಬೇಕು. ಆದರೆ ಇದರ ವಿರುದ್ಧವಾಗಿರುವ ರಾಜಕೀಯ ಸಂಸ್ಥೆಗಳ ಮೇಲೆ ಕಾಂಗ್ರೆಸ್ಸಿನವರು ಯಾವ ಆಕ್ರಮಣ, ಅನ್ಯಾಯಗಳನ್ನು ಮಾತ್ರ ಮಾಡಕೂಡದು. ಅವರಿಗೂ ತಮ್ಮ ತಮ್ಮ ಅಭಿಪ್ರಾಯದಂತೆ ನಡೆಯಲು ಸಂಪೂರ್ಣ ಸ್ವಾತಂತ್ರ್ಯ ಕೊಡಬೇಕು.

ಗಾಂಧೀಜಿಯವರ ಸತ್ಯ ಮತ್ತು ಅಹಿಂಸಾ ತತ್ವಗಳಿಗೆ ವಿರುದ್ಧವಾಗಿ ಕಾಂಗ್ರೆಸ್ ಕೆಲಸಗಾರರು ನಡೆದರೆ ಅವುಗಳನ್ನೂ ಖಂಡಿಸುವದು ನನ್ನ ರೀತಿ. ಇದರಿಂದ ಕರ್ನಾಟಕದ ಬಹುಜನ ಕಾಂಗ್ರೆಸ್ ಕೆಲಸಗಾರರಿಗೆ ನಾನು ಅಪ್ರಿಯನಾದೆನು. ಅನೇಕ ನನ್ನ

ಮಿತ್ರರೂ ದೂರಾದರು. ನಾನು ಕಾಂಗ್ರೆಸ್ಸಿಗೆ ಸೇರಿದ್ದರೆ ಇಲ್ಲವೆ ಟೀಕಿಸದೆ ಸುಮ್ಮನಿದ್ದಿದ್ದರೆ ನನಗೆ ಜನರಲ್ಲಿ ಹೆಚ್ಚಾದ ಮಾನ ಮನ್ನಣೆ ದೊರೆಯುತ್ತಿದ್ದಿತೆಂಬುದೂ ನನಗೆ ಗೊತ್ತು. ಆದರೂ ಹಾಗೆ ಮಾಡುವದರಿಂದ ನನ್ನ ಮನಸ್ಸಿಗೆ ಮಾತ್ರ ಸಮಾಧಾನ ವಾಗುವದಿಲ್ಲವೆಂಬುದು ನನ್ನ ಅನುಭವ. ಅಂತೆಯೇ ನಾನು ನನಗೆ ಯುಕ್ತ ಕಂಡಂತೆಯೇ ರಾಜಕಾರಣದಲ್ಲಿಯೂ ನಡೆಯುತ್ತಾ ಬಂದಿದ್ದೇನೆ. ಇದೇ ನನಗೆ ತೃಪ್ತಿಕರವಾದ ರೀತಿಯಾಗಿದೆ.

ಕಾಂಗ್ರೆಸ್ ಪಕ್ಷವೇ ಗ್ರಾಮಪಂಚಾಯತಿಯಿಂದ ಶಾಸನ ಮಂಡಲಿಗಳ ವರೆಗಿನ ಎಲ್ಲಾ ರಾಜಕೀಯ ಸಂಸ್ಥೆಗಳಲ್ಲಿಯೂ ಸೇರಿ ಏಕಸೂತ್ರದಿಂದ ಕೆಲಸ ಮಾಡಬೇಕು. ಮತ್ತು ಹೊರಗಡೆಯಲ್ಲಿಯೂ ಜನಜಾಗೃತಿಯ ಪ್ರಚಂಡ ಕಾರ್ಯವನ್ನು ನಡೆಯಿಸಬೇಕು. ಇದೆ ಸ್ವರಾಜ್ಯ ಪ್ರಾಪ್ತಿಗೆ ಹೆಚ್ಚು ಪರಿಣಾಮಕಾರಿಯಾದ ರೀತಿಯೆಂದು ನನ್ನ ತಿಳಿವಳಿಕೆ.

**ಗುಣ, ಸ್ವಭಾವ ಮತ್ತು ಅನುಭವ:—** ಕೆಲವು ನನ್ನ ಗುಣ, ಸ್ವಭಾವ ಮತ್ತು ಅನುಭವ-ಅಭಿರುಚಿಗಳನ್ನು ಇಲ್ಲಿ ತಿಳಿಸುವದು ಅನುಚಿತವಾಗಲಾರದು. ಶುಚಿ, ಶಾಂತತೆ ಮತ್ತು ಸೇವೆ ಇವು ನನ್ನ ಗುಣ, ಸ್ವಭಾವ, ಅಭಿರುಚಿಗಳ ಸಾರವಾಗಿವೆಯೆಂದು ಹೇಳಬಹುದು. ವಿದ್ಯಾಲಯದಲ್ಲಿ ವಿದ್ಯಾರ್ಥಿಗಳ ದೃಷ್ಟಿಯ ಮುಂದೆ ಇವೇ ಮೂರು ಸಂಗತಿಗಳನ್ನು ಇಡಲು ಬಹು ಪ್ರಯತ್ನಿಸಿದೆನು.

ಸ್ವಚ್ಛತೆ, ಸಾದಾತನಗಳ ಕಡೆಗೇ ಒಲವು ಹೆಚ್ಚು. ಬಳಕೆಯ ಪದಾರ್ಥಗಳೆಲ್ಲಾ ಅಚ್ಚುಕಟ್ಟಾಗಿರಬೇಕು. ಬಣ್ಣ ಮಾತುಗಾರಿಕೆ ಹರಟೆಗಳೆಲ್ಲಾ ಶೂನ್ಯ. ಸುಮ್ಮನೇ ಒಬ್ಬರ ಸಂಗಡ ಮಾತನಾ

ಡುವ ಪ್ರವೃತ್ತಿಯಲ್ಲ. ಇದರಿಂದ ಗರ್ವಿಯೆಂದೂ ಅನೇಕರು ತಿಳಿದುಕೊಂಡುದುಂಟು. ಏನಾದರೊಂದು ಕಾರ್ಯದಲ್ಲಿಯೇ ತೊಡಗಿರುವ ಸ್ವಭಾವ. ಪ್ರತಿ ನಿತ್ಯ ೭ ತಾಸು ನಿದ್ರೆ ಬೇಕೇಬೇಕು. ಊಟಕ್ಕಿಂತ ನಿದ್ರೆಯು ನನ್ನ ಆರೋಗ್ಯಕ್ಕೆ ಬಹು ಅಗತ್ಯ.

ಬಹು ಮಿತವ್ಯಯ. ಒಂದೂಕಾಲು ರೂಪಾಯಿ ಕೊಟ್ಟು ಒಂದು ಬಿ. ಟೈಂಪೀಸ ತೆಗೆದುಕೊಂಡು ೧೨ ವರುಷ ಉಪಯೋಗಿಸಿದೆನು. ಅನಂತರ ನಾನು ಯಾವ ಟೈಂಪೀಸ್ ಅಥವಾ ವಾಚ್ ತೆಗೆದುಕೊಳ್ಳಲಿಲ್ಲ. ಆದರೆ ಕಾಲಕಾಲಕ್ಕೆ ಸರಿಯಾಗಿ ಕೆಲಸವಾಗಲೇಬೇಕು. ಅದರ ಕಡೆಗೆ ಬಹು ಎಚ್ಚರಿಕೆ. ಫೌಂಟನ್‌ಪೆನ್ನು ಮೊದಲಾದ ಅನವಶ್ಯಕ ವಸ್ತುಗಳನ್ನು ಉಪಯೋಗಿಸುವದಿಲ್ಲ. ವರುಷಕ್ಕೆ ಬೇಕಾಗುವ ೮-೧೦ ಖಾದಿ ಬಟ್ಟೆಗಳಿಗಾಗಿ ೧೦-೧೨ ರೂ. ಮಾತ್ರ ವೆಚ್ಚ. ಒಂದೇ ಹೊತ್ತು ಊಟ. ಊಟಕ್ಕೆ ತಿಂಗಳಿಗೆ ನಾಲ್ಕೈದು ರೂಪಾಯಿಗಳಾದರೆ ಸಾಕು.

ಹೀಗೆ ನನ್ನ ಜೀವನಕ್ಕೆ ವರುಷಕ್ಕೆ ೭೫ ರೂಪಾಯಿಗಳು ಸಾಕು. ಯಾವ ಚಟದ ವಸ್ತುಗಳಾಗಲಿ, ತಿಂಡಿಗಳಾಗಲಿ ಬೇಕಿಲ್ಲ. ಸ್ವಸ್ಥಳದಲ್ಲಿದ್ದರೆ ಸಾಯಂಕಾಲ ಸ್ವಲ್ಪ ಉಪಹಾರ. ಇದರಿಂದ ನನ್ನ ಆರೋಗ್ಯ ಚೆನ್ನಾಗಿದೆ.

ಪಟ್ಟಣವಾಸ ಸೇರುವುದಿಲ್ಲ. ಅಡವಿ, ಗುಡ್ಡ ಮೊದಲಾದ ಸೃಷ್ಟಿ ಸೌಂದರ್ಯವನ್ನು ನೋಡುವುದರ ಕಡೆಗೇ ಒಲವು. ರಾತ್ರಿ ಆಕಾಶವನ್ನು ನೋಡುವದೊಂದು ಹವ್ಯಾಸವೆಂದೇ ಹೇಳಬಹುದು. ಪ್ರಶಾಂತ ವಾತಾವರಣದಲ್ಲಿ ಅತ್ಯದ್ಭುತವಾದ ನಕ್ಷತ್ರಮಂಡಲವನ್ನು ನೋಡುತ್ತ ಹೊಂದುವ ಆನಂದವು ಲಿಂಗಪೂಜೆಗಿಂತ ನನಗೆ

ಹೆಚ್ಚಿನದು. ಹಿಡಿದ ಕೆಲಸದಲ್ಲಿ, ನುಡಿದ ಮಾತಿನಲ್ಲಿ ಹಟ ಹೆಚ್ಚು. ಹೆಚ್ಚುಕಡಿಮೆ ಸಹಿಸಿಕೊಂಡು, ಜನರ ಒಲವು ಹಿಡಿದು, ಕೂಡಿ ಕೆಲಸ ಮಾಡುವ ಪ್ರವೃತ್ತಿಯಿಲ್ಲ. ಕಾರ್ಯದಲ್ಲಿ ಮಂದತನ ಸೇರು ವುದಿಲ್ಲ. ಓದು-ಬರಹಗಳ ವಿನಾ ತೋಟದ ಕೆಲಸ ಪ್ರಿಯವಾ ದುದು.

ಉಪ್ಪು, ಕಾರ, ಸಿಹಿಗಳನ್ನು ಬಿಟ್ಟು ಸಾತ್ವಿಕ ಆಹಾರವನ್ನು ಮಿತವಾಗಿ ಸೇವಿಸಿ ನಾಲಿಗೆಯನ್ನು ಬಿಗಿಹಿಡಿದು, ಮಹತ್ವಾಕಾಂಕ್ಷಿ ಯಾಗಿ, ಯಾವುದೊಂದು ಉದಾತ್ತ ಕಾರ್ಯದಲ್ಲಿಯೇ ಆಸಕ್ತನಾಗಿ ದ್ದರೆ ತ್ರಿಕರಣಗಳಲ್ಲಿ ಕಾಯಸಂಬಂಧವಾದ ಬ್ರಹ್ಮಚರ್ಯವನ್ನು ಮಾತ್ರ ಧಾರಾಳವಾಗಿ ಆಚರಿಸಬಹುದು. ಆದರಿಂದ ಮಾನಸಿಕ ಒಲವು ಎಷ್ಟೋ ಹೆಚ್ಚಿ ಸಾರ್ವಜನಿಕ ಸೇವೆಗೆ ಬಹು ಸಹಾಯ ವಾಗುತ್ತದೆ. ಸಾಂಪತ್ತಿಕ ಕೊರತೆಯುಳ್ಳ ಮತ್ತು ಸಾಮಾನ್ಯ ಬುದ್ಧಿಶಕ್ತಿಯುಳ್ಳ ಜನರು ವಿವಾಹಿತರಾದರೆ ಆದರಿಂದ ಸಾರ್ವ ಜನಿಕ ಕಾರ್ಯ ಇಷ್ಟಾದರೂ ಆಗಲಾರದು.

ನಾನು ಈ ದಾರಿಯನ್ನು ಹಿಡಿಯದೇ ವಿವಾಹಿತನಾಗಿದ್ದರೆ ಜನಸಂಖ್ಯೆಯಲ್ಲಿ ೪-೫ ಹೆಚ್ಚಿಸಿ, ೪-೫ ಸಾವಿರ ರೂಪಾಯಿ ಕಾದಿಟ್ಟು, ಈಗ ತಿಂಗಳಿಗೆ ೧೫-೨೦ ರೂಪಾಯಿ ವಿಶ್ರಾಂತಿವೇತನ (ಪೆನ್‌ಶನ್) ಹೊಂದುವ ಮಾಸ್ತರನಾಗಿರುತ್ತಿದ್ದೆನು. ಆದಕ್ಕಿಂತ ನಾನು ಈಗ ಎಷ್ಟೋ ಹೆಚ್ಚು ಜನಸೇವೆಯನ್ನು ಮಾಡಿದ್ದೇನೆಂದು ನನಗೆ ಬಹು ಸಮಾಧಾನ.



## ೩. ವ್ಯಕ್ತಿತ್ವ ಹಾಗೂ ಕೃತಿಗಳ ವಿಮರ್ಶೆ

ವ್ಯಕ್ತಿಯೊಬ್ಬನ ಜೀವನಸಾಧನೆಗಳನ್ನು ವಿಮರ್ಶಿಸುವ ಕೆಲಸ ಸುಲಭವಾದುದಲ್ಲ. ಅದರಲ್ಲೂ ಮಹಾವ್ಯಕ್ತಿಗಳ ಜೀವನವನ್ನು ಕುರಿತು ಪರಿಪೂರ್ಣ ವಿವೇಚನೆ ಮಾಡುವುದು ಬಹು ಕಷ್ಟ. ಅಲ್ಲದೆ, ವ್ಯಕ್ತಿಜೀವನದ ವಿಮರ್ಶೆಗೆ ಅಳತೆಗೋಲು ಯಾವುದು ? ವ್ಯಕ್ತಿಯು ನಡೆಸಿದ ನಿಷ್ಕಳಂಕವಾದ ಶುದ್ಧ ಜೀವನವೇ ? ಅಥವಾ ವ್ಯಕ್ತಿಯಿಂದ ದೇಶ ಮತ್ತು ಸಮಾಜಕ್ಕೆ ಆದ ಪ್ರಯೋಜನವೇ ? ಎರಡನೆಯದು ಲೋಕಹಿತಕ್ಕೆ ಸಂಬಂಧಿಸಿದ್ದು. ಮೊದಲನೆಯದು ವ್ಯಕ್ತಿಯ ವಿಕಾಸಕ್ಕೆ ಸಂಬಂದಿಸಿದ್ದು. ಇದೂ ಕೂಡ ಸಾಮಾಜಿಕ ಪರಿಣಾಮಗಳಿಂದ ಹೊರತಾಗಿಲ್ಲ. ಒಬ್ಬ ವ್ಯಕ್ತಿಯು ಶುದ್ಧ ಚಾರಿ-ತ್ರ್ಯವುಳ್ಳವನಾಗಿ ಬಾಳಿದರೆ ಒಳ್ಳೆಯ ಸಮಾಜದ ರಚನೆಗೆ ಬೆಂಬಲ ಬರುತ್ತದೆ. ಏಕೆಂದರೆ ವ್ಯಕ್ತಿಯೇ ಸಮಾಜದ ಅಡಿಗಲ್ಲು. ಇನ್ನು ಲೋಕಹಿತದ ಮಾತನ್ನು ಕುರಿತು ಆಲೋಚಿಸುವುದಾದರೆ ಎರಡು ರೀತಿಯ ಪರಿಣಾಮಗಳನ್ನು ನಾವು ಗಣನೆಗೆ ತೆಗೆದುಕೊಳ್ಳಬೇಕು. ವ್ಯಕ್ತಿಯ ಜೀವಿತಕಾಲದಲ್ಲಿ ಆತನಿಂದಾದ ಪ್ರಭಾವ ಮತ್ತು ಪ್ರಯೋಜನಗಳೇನು ಎಂಬುದು ಒಂದು ಬಗೆಯ ಪರಿಣಾಮ. ವ್ಯಕ್ತಿಯ ಪ್ರಭಾವ ಅನೇಕ ತಲೆಮಾರಿನವರ ಮೇಲೂ ಉಂಟಾಗಬಹುದು. ಇದು ಮಹಾವ್ಯಕ್ತಿಗಳು ಮಾನವಕುಲಕ್ಕೆ ನೀಡುವ ಅಮೌಲ್ಯ ಮತ್ತು ಶಾಶ್ವತ ಕಾಣಿಕೆಯಾಗಿದೆ. ಬುದ್ಧ, ಬಸವೇಶ್ವರ,

ಪ್ಲೇಟೋ, ಅರಿಸ್ಟಾಟಲ್, ರೂಸೋ ಮೊದಲಾದವರು ಈ ಮಾಲಿಕೆಯಲ್ಲಿ ಬರುತ್ತಾರೆ. ಇಲ್ಲಿ ಕೂಡ ನವವಿಚಾರಸರಣಿಯಿಂದ ಜನಾಂಗಕ್ಕೆ ಸ್ಫೂರ್ತಿಯಿತ್ತವರು (Men of ideas) ಹಾಗೂ ಕಾರ್ಯಸಾಧಕರು (Men of action) ಎಂದು ಮಹಾ ವ್ಯಕ್ತಿಗಳ ವಿಂಗಡನೆ ಮಾಡಬಹುದು.

ಮೇಲಿನ ಕೆಲವು ಸಾಮಾನ್ಯ ಸೂತ್ರಗಳ ಬೆಳಕಿನಲ್ಲಿ ಮಂಜಪ್ಪನವರ ಜೀವನ ಮತ್ತು ಸಾಹಿತ್ಯ ವಿಮರ್ಶೆಯನ್ನು ಮಾಡೋಣ. ಪ್ರವಾದಿಗಳನ್ನು ವಿದೇಶಗಳಲ್ಲಿ ಗೌರವಿಸಿದರೆ ಸ್ವದೇಶದಲ್ಲಿ ತೆಗಳುತ್ತಾರೆ ಎಂಬ ಗಾದೆಯ ಮಾತಿದೆ. ಇದು ಪೂರ್ಣ ಸತ್ಯದಿಂದ ಕೂಡಿದೆ ಎಂದು ನಾವು ಒಪ್ಪದಿದ್ದರೂ ಭಾರತದಲ್ಲಿ ನಿಷ್ಠಾವಂತ ಕಾರ್ಯಕರ್ತರನ್ನು ಮರೆಯುವ ಅಥವಾ ಕಡೆಗಣಿಸುವ ಕೆಟ್ಟ ಪ್ರವೃತ್ತಿಯಿದೆ. ಬೇರೆಯವರು ನಮ್ಮವರು ದೊಡ್ಡವರೆಂದು ಹೇಳಿದಮೇಲೆ ನಾವು ಹುರುಪಿನಿಂದ ನಮ್ಮವರನ್ನು ಗೌರವಿಸಲು ಮುಂದಾಗುತ್ತೇವೆ. ಹರ್ಡೇಕರ ಮಂಜಪ್ಪನವರ ಬಗ್ಗೆ ಈ ಮಾತುಗಳು ಹೆಚ್ಚು ಅನ್ವಯಿಸುತ್ತವೆ. ಕರ್ನಾಟಕದ ನಿಷ್ಠಾವಂತ ಸೇವಕರೂ, ನುರಿತ ಬರೆಹಗಾರರೂ, ಶ್ರೇಷ್ಠ ವಾಗ್ಮಿಗಳೂ ಪ್ರಗತಿಶೀಲ ವಿಚಾರವಿಮರ್ಶೆಗಳಿಗೆ ಹೆಸರಾದವರೂ ಆಗಿದ್ದ ಮಂಜಪ್ಪನವರ ಜೀವನವು ರಾಷ್ಟ್ರ ಮತ್ತು ಸಮಾಜಗಳಿಗಾಗಿ ಮುಡುಪಿಟ್ಟ ಶುಭ್ರವಾದ ಜೀವನವಾಗಿತ್ತು. 'ನನ್ನ ಮೂವತ್ತು ವರ್ಷಗಳ ಕಾಣಿಕೆ' ಎಂಬ ಅವರ ಆತ್ಮಚರಿತ್ರೆಯು ಸಾರ್ವಜನಿಕ ಜೀವನದ ಆದರ್ಶ ಕತೆಯಂತಿದೆ. ೧೮೮೬ರ ಫೆಬ್ರುವರಿ ೧೮ ರಂದು ಬನವಾಸಿಯಲ್ಲಿ ಜನಿಸಿ ಶಿರ್ಶಿಯಲ್ಲಿ ಶಿಕ್ಷಣಪಡೆದು ಶಿಕ್ಷಕವೃತ್ತಿಯನ್ನು ತೊರೆದು

೧೯೦೬ರಲ್ಲಿ ಸಾರ್ವಜನಿಕ ಜೀವನದಲ್ಲಿ ಕಾಲಿರಿಸಿದ ಮಂಜಪ್ಪ ನವರು ೧೯೪೭ರ ಜನವರಿ ಮೂರರಂದು ತಮ್ಮ ಇಹಲೋಕ ಜೀವನವನ್ನು ಮುಗಿಸಿದರು. ಅರವತ್ತು ವರ್ಷಗಳನ್ನು ದಾಟಿ ಅರವತ್ತೊಂದನೆಯ ಹುಟ್ಟುಹಬ್ಬವನ್ನು ಕಣ್ಣಾರೆ ಕಂಡು ಇದಾದ ಸ್ವಲ್ಪಕಾಲದಲ್ಲಿಯೇ ಕಣ್ಮರೆಯಾದ ಮಂಜಪ್ಪನವರ ಜೀವನವು ಆದರ್ಶ ಜೀವನ ಮಾತ್ರವಲ್ಲದೆ ಫಲಪ್ರದ ಜೀವನವಾಗಿತ್ತು.

ರಾಷ್ಟ್ರೀಯತೆಯೇ ಮಂಜಪ್ಪನವರ ಸಮಗ್ರ ಜೀವನದ ಸಂದೇಶವಾಗಿತ್ತು. ಅವರು ಕೈಕೊಂಡ ಪತ್ರಿಕೋದ್ಯಮ, ಗ್ರಂಥ ರಚನೆ, ಜೀವನ ಶಿಕ್ಷಣ, ಖಾದಿ ಪ್ರಚಾರ ಮೊದಲಾದ ಚಟುವಟಿಕೆ ಗಳಿಗೆಲ್ಲಾ ರಾಷ್ಟ್ರೀಯ ಉತ್ಥಾನವೇ ಪ್ರೇರಕಶಕ್ತಿಯಾಗಿತ್ತು. ರಾಷ್ಟ್ರೀಯ ಐಕ್ಯತೆ ಹಾಗೂ ಪ್ರಗತಿಗಳೇ ಅವರ ಜೀವನದ ಗುರಿ ಗಳಾಗಿದ್ದವು. ರಾಷ್ಟ್ರೀಯ ದೃಷ್ಟಿಯನ್ನು ಪ್ರಸಾರಮಾಡುವುದೇ ಅವರ ಬಾಳಿನ ಉಸಿರಾಗಿತ್ತು. ಅಂತೆಯೇ ಅವರು ರಾಷ್ಟ್ರಧರ್ಮ ದೃಷ್ಟಾರರೆಂದು ಕರೆಯಿಸಿಕೊಳ್ಳಲು ಅರ್ಹತೆ ಪಡೆದ ಯೋಗ್ಯ ವ್ಯಕ್ತಿಗಳಾಗಿದ್ದರು.

ಮಂಜಪ್ಪನವರು ಆಡಿದ ನುಡಿ ಮತ್ತು ಮಾಡಿದ ಎಲ್ಲ ಕೃತಿಗಳಲ್ಲಿ ರಾಷ್ಟ್ರಧರ್ಮತತ್ವಗಳೇ ಒಡೆದು ಕಾಣಿಸುತ್ತವೆ. ಅವರು ಉಜ್ವಲ ಕನ್ನಡಿಗರೂ ನಿಷ್ಠಾವಂತ ವೀರಶೈವರೂ ಆಗಿದ್ದರೂ ಅವರ ಭಾರತೀಯತ್ವಕ್ಕೆ ಎಂದೂ ಚ್ಯುತಿ ಬರಲಿಲ್ಲ. ಅವರು ಪ್ರತಿ ಪಾದಿಸಿದ ರಾಷ್ಟ್ರೀಯತೆಯು ಜಾತಿಮತಪಂಥಗಳನ್ನೂ, ಭಾಷೆ, ಪ್ರಾದೇಶಿಕತೆ ಹಾಗೂ ಇತರ ಪ್ರತ್ಯೇಕತೆಗಳನ್ನೂ ದಾಟಿದ ಭಾರತ-ನಿಷ್ಠ ಸೂತ್ರವಾಗಿತ್ತು. ಅವರು ಕೈಕೊಂಡ ಚಟುವಟಿಕೆಗಳು

ರಾಷ್ಟ್ರಧರ್ಮ ಪೋಷಕವಾಗಿದ್ದವು. ಕಡೆಕಡೆಗೆ ತಮ್ಮ ರಾಜಕೀಯ ಅಭಿಪ್ರಾಯಗಳನ್ನು ಬದಲಾಯಿಸಿದಾಗ ಕೂಡ ರಾಷ್ಟ್ರದ ಅಖಂಡ-ತ್ವವನ್ನು ಕಾಯ್ದುಕೊಳ್ಳುವುದೇ ಅವರ ಉದ್ದೇಶವಾಗಿತ್ತು. ಭಾರತ ವಿಭಜನೆಗೆ ಅವರು ಬದ್ಧ ವಿರೋಧಿಗಳಾಗಿದ್ದರು. ರಾಷ್ಟ್ರ ಧರ್ಮದ ಸಾಧನೆಗಾಗಿಯೇ ಅವರ ಜೀವನ ಮೀಸಲಾಗಿತ್ತು. ರಾಷ್ಟ್ರೀಯ ಸಾಹಿತ್ಯರಚನೆ ಹಾಗೂ ರಾಷ್ಟ್ರಧರ್ಮ ಸಾಧನೆ ಯಲ್ಲಿಯೇ ತಮ್ಮ ಬಾಳನ್ನು ಸವೆಯಿಸಿದ ಅವರು ಅರವಿಂದರಂತೆ ನಿಸ್ಸೀಮ ರಾಷ್ಟ್ರೀಯವಾದಿಗಳಾಗಿದ್ದರು.ಅರವಿಂದರು ರಾಷ್ಟ್ರೀಯ ಪತ್ರಿಕೆಯಾದ 'ವಂದೇ ಮಾತರಂ'ನ್ನು ನಡೆಯಿಸಿದಂತೆ 'ಧನು ರ್ಧಾರಿ'ಯನ್ನು ನಡೆಯಿಸಿದರು. ಅಂದು ಬಂಗಾಲದ ವಿಭಜನೆ ಯನ್ನು ಪ್ರತಿಭಟಿಸಿ ರಾಷ್ಟ್ರಜಾಗೃತಿಗಾಗಿ ಅರವಿಂದರು ಶ್ರಮಿಸಿ ಬಂಗಾಲಿಗಳನ್ನೂ ಇಡೀ ರಾಷ್ಟ್ರವನ್ನೂ ಬಡಿದೆಬ್ಬಿಸಿದರು. ತಿಲಕರು ತಮ್ಮ ಉಜ್ವಲ ರಾಷ್ಟ್ರೀಯತೆಯೆಂಬ ಅಸ್ತ್ರದಿಂದ ಮಹಾರಾಷ್ಟ್ರ ದಲ್ಲಿ ದೊಡ್ಡ ಜನಜಾಗೃತಿಯನ್ನುಂಟುಮಾಡಿದರು. ಕೇವಲ ಧಾರ್ಮಿಕನಿಷ್ಠೆ ಹಾಗೂ ಧರ್ಮ ಭಕ್ತಿಗಳ ಪರಿಸರದಲ್ಲಿ ಬೆಳೆದು ಬಂದ ಭಾರತದಲ್ಲಿ ರಾಷ್ಟ್ರಭಕ್ತಿಯ ಮಂತ್ರವನ್ನು ಅರವಿಂದ. ತಿಲಕ ರಂತಹ ಭಾರತ ಮುಂದಾಳುಗಳು ಬೋಧಿಸಿದಂತೆ ಹಿಂದುಳಿದ ಹಾಗೂ ಹರಿದುಹಂಚಿಹೋದ ಕನ್ನಡನಾಡಿನಲ್ಲಿ ಮಂಜಪ್ಪನವರು ರಾಷ್ಟ್ರೀಯತೆಯೆಂಬ ಹಣತೆಯನ್ನು ಹಚ್ಚಿದರು. ಧನುರ್ಧಾರಿಯು ರಾಷ್ಟ್ರೀಯ ಧರ್ಮವನ್ನು ಹಾಗೂ ಇತರ ದೇಶಭಕ್ತರ ಅಭಿಪ್ರಾ ಯಗಳನ್ನೂ ಕನ್ನಡಿಗರಲ್ಲಿ ಪ್ರಸಾರ ಮಾಡಿತು. ರಾಷ್ಟ್ರೀಯತೆಯೇ ಧರ್ಮವೆಂಬ ಅಂದಿನ ಸಂದೇಶವನ್ನು ಕನ್ನಡನಾಡಿನಲ್ಲಿ ಮೊಳಗಿ-

ಸಿತು. ಕೇವಲ ರಾಷ್ಟ್ರೀಯತೆಯ ವಿಚಾರಗಳನ್ನು ಪ್ರಸಾರಮಾಡಿ ಕುಳಿತುಕೊಳ್ಳದೆ ರಾಷ್ಟ್ರಜೀವನಸಾಧನೆಯಲ್ಲಿ ಶ್ರದ್ಧೆಯಿಂದ ತೊಡಗಿದ ಸೇವಾಬುದ್ಧಿಯ ಈ ವ್ಯಕ್ತಿಯನ್ನು ರಾಷ್ಟ್ರಧರ್ಮಸಾಧಕರೆನ್ನಬಹುದು. ಇಷ್ಟೇ ಅಲ್ಲ ಸ್ವತಂತ್ರ ಭಾರತದ ರೂಪರೇಷೆಗಳನ್ನು ಹಾಗೂ ದೂರದೃಷ್ಟಿಯಿಂದ ಅನೇಕ ರಾಷ್ಟ್ರೀಯ ಮಹತ್ವದ ವಿಚಾರಗಳನ್ನು ಪ್ರತಿಪಾದಿಸಿದ ಆದರ್ಶ ಮಹಾವ್ಯಕ್ತಿ ಶ್ರೀಯುತ ಮಂಜಪ್ಪನವರನ್ನು ರಾಷ್ಟ್ರಧರ್ಮದ್ರಷ್ಟಾರನೆಂದು ಕರೆಯುವುದೇ ಯಥೋಚಿತ.

## ರಾಷ್ಟ್ರೀಯ ಪತ್ರಿಕೋದ್ಯಮಿ

ಕನ್ನಡನಾಡಿನಲ್ಲಿ ರಾಷ್ಟ್ರೀಯತೆಯ ಪ್ರಸಾರಕ್ಕಾಗಿ ಶ್ರಮಿಸಿದ ಕೆಲವೇ ಪತ್ರಿಕೋದ್ಯಮಿಗಳಲ್ಲಿ ಮಂಜಪ್ಪನವರು ಒಬ್ಬರು. ರಾಷ್ಟ್ರೀಯ ಪತ್ರಿಕೋದ್ಯಮದ ಹಿರಿಯ ಪುರಸ್ಕರ್ತರಿವರು. ೧೯೦೬ ರಲ್ಲಿ 'ಧನುರ್ಧಾರಿ' ಎಂಬ ಪತ್ರಿಕೆಯನ್ನು ಸ್ಥಾಪಿಸಿ ಕಷ್ಟಗಳ ನಡುವೆ ಅದನ್ನು ನಡೆಯಿಸಿಕೊಂಡು ಬಂದರು. ೧೯೦೭ ರಲ್ಲಿ ಮಂಗಳೂರಿನಲ್ಲಿ 'ಸ್ವದೇಶಾಭಿಮಾನಿ' ಎಂಬ ಪತ್ರಿಕೆ ಉದಯವಾಯಿತು. ಹೀಗೆ ರಾಷ್ಟ್ರೀಯ ಪತ್ರಿಕೋದ್ಯಮದಲ್ಲಿ ಮೊದಲಿಗರಾದ ಮಂಜಪ್ಪನವರು ರಾಷ್ಟ್ರೀಯ ವಿಚಾರಗಳನ್ನು ಧನುರ್ಧಾರಿಯ ಮೂಲಕ ಪ್ರಸಾರಮಾಡಿದರು. ಹಣದ ಅಡಚಣೆಯಿಂದ ೧೯೧೫ ರಲ್ಲಿ ಈ ಪತ್ರಿಕೆ ನಿಂತುಹೋಯಿತು. ಮೈಸೂರು ಸಂಸ್ಥಾನದ ಗಡಿಭಾಗವಾಗಿದ್ದ ಚಿತ್ರದುರ್ಗ ಜಿಲ್ಲೆಯ ದಾವಣಗೆರೆಯಿಂದ ಪ್ರತಿಕೂಲ ಪರಿಸ್ಥಿತಿಗಳ ನಡುವೆ ಧನುರ್ಧಾರಿಯೆಂಬ ವಾರಪತ್ರಿಕೆಯನ್ನು ಅಷ್ಟು ವರ್ಷ ನಡೆಸಿಕೊಂಡು ಬಂದ ಮಂಜಪ್ಪ

ನವರ ಸಾಹಸ ಮೆಚ್ಚತಕ್ಕದ್ದು. ರಾಷ್ಟ್ರೀಯತೆಯ ಸಂದೇಶವನ್ನು ಜನತೆಯಲ್ಲಿ ಧನುರ್ಧಾರಿಯ ಮೂಲಕ ಪ್ರಸಾರಮಾಡಿದರು. ಜ್ಞಾನಯುಕ್ತವಾದ ಕರ್ಮವಿರಬೇಕೆಂದೂ, ಕರ್ಮವು ಜ್ಞಾನದಿಂದ ಪ್ರಭಾವಿತವಾಗಿರಬೇಕೆಂದೂ ಹೇಳುವ ತತ್ವವನ್ನು ಧನುರ್ಧಾ-ರಿಯು ಎತ್ತಿಹಿಡಿಯಿತು. ಮುಂದೆ ಮಂಜಪ್ಪನವರು 'ಖಾದಿ ವಿಜಯ'ವೆಂಬ ಪತ್ರಿಕೆಯನ್ನು ಶ್ರೀ ರಂಗರಾವ ದಿವಾಕರರೊಂದಿಗೆ ಸಂಪಾದಕರಾಗಿ ನಡೆಸಿದರು. ಎರಡು ವರ್ಷಗಳ ಮೇಲೆ ಇದು 'ಉದ್ಯೋಗ' ಎಂಬ ಹೆಸರಿನಿಂದ ಪ್ರಕಟವಾಗಲಾರಂಭಿಸಿತು. ಉದ್ಯೋಗ ಪತ್ರಿಕೆಯ ಉದ್ದೇಶವು ಜನತೆಯಲ್ಲಿ ರಾಷ್ಟ್ರೀಯ ದೃಷ್ಟಿಯನ್ನು ಹೆಚ್ಚಿಸುವುದೇ ಆಗಿತ್ತು. ಭಾರತದಲ್ಲಿ ಗ್ರಾಮ ಕೈಗಾರಿಕೆಗಳನ್ನು ಪುನರುಜ್ಜೀವನಗೊಳಿಸಿ ಆರ್ಥಿಕ ಸ್ವಾವಲಂಬನೆ ಯನ್ನುಂಟುಮಾಡುವ ಗುರಿಯಿಂದ ಉದ್ಯೋಗ ಪತ್ರಿಕೆಯೂ ಬಹಳ ಉಪಯುಕ್ತವಾಗಿತ್ತು. ಮುಂದೆ ಅವರು 'ಶರಣಸಂದೇಶ' ವಾರಪತ್ರಿಕೆಯನ್ನು ಹೊರಡಿಸಿ ದುಡಿದಾಗಲೂ ರಾಷ್ಟ್ರಸಂಘಟನೆ ಯನ್ನೇ ಮುಖ್ಯ ಉದ್ದೇಶವುಳ್ಳವರಾಗಿದ್ದರು. ಶರಣಸಂದೇಶವು ಸ್ವಾತಂತ್ರ್ಯ ಸಂಪಾದನೆಗಾಗಿ ನಿರ್ಭಯವಾಗಿ ಹೋರಾಡಿತು. ಕನ್ನಡಿಗರಲ್ಲಿ ರಚನಾತ್ಮಕ ಹಾಗೂ ರಾಷ್ಟ್ರೀಯ ದೃಷ್ಟಿಯನ್ನು ಹೆಚ್ಚಿಸಲು ಶ್ರಮಿಸಿತು. ಮಂಜಪ್ಪನವರು ಪತ್ರಿಕೋದ್ಯೋಗಿ ಯಾಗಿಯೇ ತಮ್ಮ ಜೀವನಯಾತ್ರೆಯನ್ನು ಮುಕ್ತಾಯಗೊಳಿಸಿ ದರು. ರಾಷ್ಟ್ರದೇವಿಯ ಆರಾಧನೆಯೇ ಅವರ ಪತ್ರಿಕೋದ್ಯಮದ ಮೂಲಸೂತ್ರವಾಗಿತ್ತು. ಅವರ ಪತ್ರಿಕೋದ್ಯಮವು ವೃತ್ತಿ ಯಾಗಿರದೆ ಜನಸೇವೆಗಾಗಿ ಮೀಸಲಾದ ತಪಸ್ಸಾಗಿತ್ತು. ಅವರು

ಹಣಗಳಿಸುವ ಪತ್ರಿಕೋದ್ಯಮಿಗಳಾಗಿರದೆ ರಾಷ್ಟ್ರಹಿತದ ವ್ರತ ಧಾರಿಗಳಾಗಿದ್ದರು. ಕನ್ನಡನಾಡಿನ ರಾಷ್ಟ್ರೀಯ ಪತ್ರಿಕೆಗಳ ಚರಿತ್ರೆಯಲ್ಲಿ ಮಂಜಪ್ಪನವರ ಸ್ಥಾನ ಉನ್ನತವಾಗಿದೆ. ಅವರ ಸಂಪಾದಕೀಯ ಬರಹಗಳಲ್ಲಿ ರಾಷ್ಟ್ರೀಯ ವಿಚಾರಗಳನ್ನೂ ಮತ್ತು ದೂರಾಲೋಚನೆಯಿಂದ ಕೂಡಿದ ಅಭಿಪ್ರಾಯಗಳನ್ನೂ ಗುರುತಿಸಬಹುದು. ಪತ್ರಿಕಾ ಬರಹಗಳನ್ನು ಸಾಹಿತ್ಯಮಟ್ಟಕ್ಕೇರಿ-ಸಿದ ಶ್ರೇಯಸ್ಸು ಮಂಜಪ್ಪನವರಿಗೆ ಸಲ್ಲುತ್ತದೆ.

## ರಾಷ್ಟ್ರೀಯ ಸಾಹಿತ್ಯನಿರ್ಮಾಪಕ

ಬ್ರಿಟಿಷರ ಆಳಿಕೆ ಇಲ್ಲಿ ಸ್ಥಾಪಿತವಾಗಿ ಶಾಂತಿ ಸುವ್ಯವಸ್ಥೆ ಗಳು ನೆಲೆಗೊಂಡ ಮೇಲೆ ದೇಶಭಾಷೆಗಳು ಹೊಸ ಹಾದಿಯಲ್ಲಿ ಬೆಳೆಯಲಾರಂಭಿಸಿದುವು. ಪದ್ಯವೊಂದನ್ನೇ ನೆಚ್ಚಿಕೊಂಡಿದ್ದ ಭಾರತೀಯರು ಗದ್ಯವನ್ನು ಬಳಸಲು ಮುಂದೆ ಬಂದರು. ಇಂಗ್ಲಿಷ್ ಶಿಕ್ಷಣಪ್ರಸಾರದ ಪರಿಣಾಮವಾಗಿ ವೃತ್ತಪತ್ರಿಕೆ ಮತ್ತು ಗ್ರಂಥರಚನೆಯ ಚಟುವಟಿಕೆಗಳು ಆರಂಭವಾದವು. ಮೊದಲು ಬಂಗಾಲಿ ಭಾಷೆಯಲ್ಲಿ ಈ ಸಾಂಸ್ಕೃತಿಕ ನವೋದಯವಾಗಿ ಹೊಸ ಗ್ರಂಥಗಳು ಹೊರಬಿದ್ದವು. ಇತರ ಪ್ರಾಂತಗಳಲ್ಲಿ ಕೂಡ ಕಾಲ ಕ್ರಮದಲ್ಲಿ ಈ ನವೋದಯದ ಗಾಳಿ ಬೀಸಿತು. ಇದರ ಜೊತೆಗೆ ಕ್ರೈಸ್ತಪಾದ್ರಿಗಳು ಮತ್ತು ಸಂಶೋಧಕರು ಆಯಾ ದೇಶಭಾಷೆಗಳ ಸಾಹಿತ್ಯವನ್ನು ವಿಮರ್ಶಾತ್ಮಕವಾಗಿ ಅಭ್ಯಸಿಸಿ ಸಂಶೋಧನಾ ಗ್ರಂಥಗಳನ್ನು ಬರೆಯತೊಡಗಿದರು. ಕನ್ನಡದಲ್ಲಿ ಕೂಡ ಆಧುನಿಕ ಸಾಹಿತ್ಯರಚನೆಗೆ ಇದೇ ರೀತಿ ಉತ್ತೇಜನ ದೊರೆತು ಗ್ರಂಥ ರಚನೆ ಮೊದಲಾಯಿತು. ಅನುವಾದ, ನಾಟಕ, ಕಾದಂಬರಿ,

ಪ್ರಬಂಧ, ಜೀವನಚರಿತ್ರೆ, ಸಣ್ಣಕತೆ, ಕವನ ಮೊದಲಾದ ನಾನಾ ರೂಪದ ನವೀನ ಸಾಹಿತ್ಯ ನಿರ್ಮಾಣವಾಗಲಾರಂಭವಾಯಿತು. ಬಂಗಾಲದಲ್ಲಿ ಬಂಕಿಮಚಂದ್ರ ಚಟರ್ಜಿ, ಆಂಧ್ರದಲ್ಲಿ ವೀರೇಶಲಿಂಗಂ ಪಂತುಲು ಮೊದಲಾದ ಬರಹಗಾರರು ಬೆಳಕಿಗೆ ಬಂದಂತೆ ಕನ್ನಡ ನಾಡಿನಲ್ಲಿಯೂ ಅನೇಕ ಸಾಹಿತಿಗಳೂ ಬೆಳಕಿಗೆ ಬಂದರು. ಹೀಗೆ ಕನ್ನಡದಲ್ಲಿ ಗದ್ಯಸಾಹಿತ್ಯ ನಿರ್ಮಾಣವನ್ನು ಕೈಕೊಂಡ ಮೊದಲಿಗ-ರಲ್ಲಿ ಮಂಜಪ್ಪನವರೂ ಒಬ್ಬರಾಗಿದ್ದಾರೆ.

## ಜೀವನಚರಿತ್ರಕಾರ

ಜೀವನಚರಿತ್ರೆಯು ಸಾಹಿತ್ಯದ ಒಂದು ಪ್ರಕಾರವೆಂಬ ಮಾತನ್ನು ಇತ್ತೀಚೆಗೆ ಒಪ್ಪಲಾಗಿದೆ. ಜೀವನಚರಿತ್ರೆಯು ಪ್ರಸಿದ್ಧ ವ್ಯಕ್ತಿಗಳ ಜೀವನಸಾಧನೆಗಳನ್ನು ವಿವರಿಸುತ್ತದೆ. ಆತ್ಮ-ಚರಿತ್ರೆ ಮತ್ತು ಜೀವನಚರಿತ್ರೆಗಳೆರಡರಲ್ಲಿ ಬರುವ ವಿಷಯ ಒಂದೇ ಆಗಿರಬಹುದಾದರೂ ಆತ್ಮಚರಿತ್ರೆಯಲ್ಲಿ ವ್ಯಕ್ತಿಯು ತನ್ನ ಬಗೆಗೆ ತಾನೇ ಬರೆಯುತ್ತಾನೆ; ಜೀವನಚರಿತ್ರೆಯಲ್ಲಿ ವ್ಯಕ್ತಿಯ ಇತಿಹಾಸ ವನ್ನು ಬೇರೆಯವರು ಬರೆಯುತ್ತಾರೆ.

ಜೀವನಚರಿತ್ರೆಯು ಸಾಹಿತ್ಯದ ಒಂದು ಪ್ರಕಾರವಾಗಿ ದ್ದರೂ ಐತಿಹಾಸಿಕ ಸಂಗತಿಗಳೇ ಇದಕ್ಕೆ ಮೂಲ. 'ಇತಿಹಾಸ-ಜ್ಞರೇ ಉತ್ತಮ ಚರಿತ್ರೆಗಳನ್ನು ಬರೆಯಬಲ್ಲರು' ಎಂಬ ವಾದ ವನ್ನು ಅಂಗೀಕರಿಸಬಹುದಾದರೂ ಜೀವನಚರಿತ್ರಕಾರನು ಸಾಹಿ-ತಿಯೂ ಆಗಬಹುದಾಗಿದೆ. ಜೀವನಚರಿತ್ರೆಯೂ ಸಾಹಿತ್ಯ ಕೃತಿಯಾಗಬಲ್ಲುದು.

ಜೀವನಚರಿತ್ರೆ ಎಂಬ ಮಾತು 'Biography' ಎಂಬ ಇಂಗ್ಲಿಷ್ ಪದದ ಅನುವಾದವಾಗಿದೆ. ಈ ಇಂಗ್ಲಿಷ್ ಪದದ ಮೂಲವನ್ನು ಹುಡುಕಿದರೆ ಜೀವನ–ಬರಹ ಎಂದು ಅರ್ಥ ದೊರೆಯುತ್ತದೆ. ಜೀವನಚರಿತ್ರೆಯು ವ್ಯಕ್ತಿಜೀವನದ ಕಥೆಯನ್ನು ಚಿತ್ರಿಸುವ ವಿಶಿಷ್ಟರೂಪದ ಸಾಹಿತ್ಯವಾಗಿದೆ. ಜೀವನಚರಿತ್ರೆ ಎಂಬ ಮಾತನ್ನು ಮೊದಲು ಕ್ರಿ. ಶ. ಆರನೆಯ ಶತಮಾನದಲ್ಲಿ ಗ್ರೀಕ್ ಲೇಖಕನೊಬ್ಬನು ಉಪಯೋಗಿಸಿದನು. ಇಂಗ್ಲೆಂಡಿನಲ್ಲಿ ಹದಿನೇಳನೆಯ ಶತಮಾನದಲ್ಲಿ ಜೀವನಚರಿತ್ರೆ ಎಂಬ ಪದವನ್ನು ಪ್ರಥಮವಾಗಿ (ಕ್ರಿ. ಶ. ೧೬೬೨ ರಲ್ಲಿ) ಫುಲ್ಲರ್ ಎಂಬಾತನೂ ಆಮೇಲೆ ಡ್ರೈಡನನೂ ಪ್ರಯೋಗ ಮಾಡಿದರು.

ಪಾಶ್ಚಾತ್ಯದೇಶಗಳಲ್ಲಿ ಕೂಡ ಜೀವನಚರಿತ್ರೆ ಸಾಹಿತ್ಯರೂಪ ದಲ್ಲಿ ಕಾಣಿಸಿಕೊಂಡದ್ದು ಯುರೋಪಿನಲ್ಲಾದ ನವೋದಯದ ತರುವಾಯ. ಮೊಟ್ಟಮೊದಲು ರಾಜರು ಮತ್ತು ಸಾಧುಸಂತರೇ ಜೀವನಚರಿತ್ರೆಗಳಿಗೆ ವಸ್ತುವಾಗಿದ್ದರು. ಕ್ರಮೇಣವಾಗಿ ಇತರ ವ್ಯಕ್ತಿಗಳ ಜೀವನಚರಿತ್ರೆಗಳು ಉದ್ಭವವಾದುವು. ನವೋದಯ ದಿಂದ ಯುರೋಪಿನಲ್ಲಿ ವ್ಯಕ್ತಿವಾದಕ್ಕೆ ಉತ್ತೇಜನ ದೊರೆತು, ವ್ಯಕ್ತಿಗಳ ಜೀವನಸಾಧನೆಗಳನ್ನು ವಿಮರ್ಶಿಸುವ ಪರಿಪಾಠವೇರ್ಪ- ಟ್ಟಿತು. ವ್ಯಕ್ತಿಯ ವೈಯಕ್ತಿಕ ಜೀವನದ ಬಗೆಗೆ ಟೀಕೆಮಾಡ ಬಾರದೆಂಬ ಸಂಪ್ರದಾಯ ಮೊದಲು ಬೆಳೆದು ವ್ಯಕ್ತಿಯ ಜೀವನದ ಉತ್ತಮ ಅಂಶಗಳನ್ನೇ ಎತ್ತಿ ತೋರಿಸಲಾಗುತ್ತಿತ್ತು. ಆದರೆ, ಈಗ ಜೀವನಚರಿತ್ರೆ ಎಂದರೆ ವ್ಯಕ್ತಿಯ ಗುಣದೋಷಗಳೆರಡನ್ನೂ ವಿಮರ್ಶಾತ್ಮಕವಾಗಿ ನೋಡಬೇಕೆಂಬ ತತ್ವವನ್ನು ಎಲ್ಲರೂ ಒಪ್ಪು

ತ್ತಾರೆ. ಜೀವನಚರಿತ್ರೆಯು ವ್ಯಕ್ತಿಯ ಜೀವನಸಾಧನೆಯನ್ನು ಅಳೆಯುವ ಸಾಧನವಾಗಿದೆ. ಯಾವುದೇ ಕ್ಷೇತ್ರದಲ್ಲಿ ದುಡಿದು ಕೀರ್ತಿಯನ್ನು ಗಳಿಸಿದ ವ್ಯಕ್ತಿಯ ಜೀವನವನ್ನು ವಿಮರ್ಶಿಸುವುದು ಜೀವನಚರಿತ್ರೆಯ ಕೆಲಸ. ಒಬ್ಬ ವ್ಯಕ್ತಿಯು–ರಾಜನಿರಲಿ, ಧರ್ಮ ಗುರುವಾಗಿರಲಿ, ಅಥವಾ ಬೇರೆ ಯಾವ ಉದ್ಯೋಗದವನೇ ಇರಲಿ–ಜೀವನದಲ್ಲಿಯ ಮಹಾಸಾಧನೆಯನ್ನೂ ಜೀವನದ ಸಫಲತೆ ಯನ್ನೂ ಬೆಳಕಿಗೆ ತರುವುದು ಜೀವನಚರಿತ್ರೆಯ ಗುರಿ.

ಇಂಗ್ಲಿಷ್ ಸಾಹಿತ್ಯದಲ್ಲಿ ಆತ್ಮಚರಿತ್ರೆಯ ಸಾಹಿತ್ಯ ಬೆಳೆದಿರು ವಂತೆ ಜೀವನಚರಿತ್ರೆಯ ಸಾಹಿತ್ಯವೂ ಬೆಳೆದಿದೆ. ಜೀವನಚರಿತ್ರೆಯು ಸಾಹಿತ್ಯದ ಒಂದು ಮುಖ್ಯ ಅಂಗವೆಂದು ಪರಿಗಣಿಸಲ್ಪಟ್ಟಿದೆ. ಹದಿ-ನೈದನೆಯ ಶತಮಾನದಲ್ಲಿ ಮೊಟ್ಟಮೊದಲು ಇಂಗ್ಲಿಷ್ ಸಾಹಿತ್ಯವು ಜೀವನಚರಿತ್ರೆಯನ್ನು ಕಂಡಿತು. ಥಾಮಸ್ ಮೋರ್ (೧೪೭೮–೧೫೩೫) ಎಂಬ ಸುಪ್ರಸಿದ್ಧ ವ್ಯಕ್ತಿಯ ಜೀವನಚಿತ್ರವನ್ನು ಆತನ ಅಳಿಯ ವಿಲಿಯಂ ರೋಪರ್ ಎಂಬಾತನು ಬರೆದನು. ಸರ್ ವಾಲ್ಟರ್ ಸ್ಕಾಟನನ್ನು ಕುರಿತು ಲೋಕ್ಹಾರ್ಟನು ಬರೆದ ಪುಸ್ತಕವೂ, ಶೆಲ್ಲಿಯನ್ನು ಕುರಿತು ಮೂರ್ನನು ಬರೆದ ಗ್ರಂಥವೂ ಇಂಗ್ಲಿಷ್ ಸಾಹಿತ್ಯದ ಪ್ರಸಿದ್ಧ ಜೀವನಚರಿತ್ರೆಗಳೆನಿಸಿವೆ. ಆದರೆ, ಅತ್ಯಂತ ಪ್ರಸಿದ್ಧ ಮತ್ತು ಜಗದ್ವಿಖ್ಯಾತವಾದ ಇಂಗ್ಲಿಷಿನ ಜೀವನ ಚರಿತ್ರೆಯೆಂದರೆ ಜಾನ್ಸನ್ನನ ಜೀವನವನ್ನು ಬಾಸ್‌ವೆಲ್ಲನು ಬರೆದ ಬೃಹತ್ಕೃತಿ. ಜೀವನಚರಿತ್ರೆಯು ವ್ಯಕ್ತಿಯ ಜೀವನದ ಮುಖ್ಯ ಸಂಗತಿಗಳನ್ನು ಆದಷ್ಟು ಸಮಗ್ರವಾಗಿ ವಿವರಿಸಬೇಕು. ಮತ್ತು ಜೀವನ ಚರಿತ್ರೆಯ ನಾಯಕನು ಬರೆಹಗಾರನಾಗಿದ್ದರೆ ಅವನ

ಬರೆವಣಿಗಳನ್ನು ಒರೆಗಲ್ಲಿಗೆ ಹಚ್ಚಿ ವಿಮರ್ಶೆ ಮಾಡಬೇಕು. ಜೀವನ ಚರಿತ್ರೆಯ ಉದ್ದೇಶಗಳು ದೇಶಕಾಲಗಳಿಗೆ ತಕ್ಕಂತೆ ಸ್ವಲ್ಪ ಭಿನ್ನ ಭಿನ್ನವಾಗಿ ತೋರಿದರೂ ವ್ಯಕ್ತಿಯ ಹಿರಿಮೆಯನ್ನು ತೋರಿಸು ವುದೇ ಜೀವನಚರಿತ್ರೆಕಾರರ ಮುಖ್ಯ ಗುರಿ. ಸಣ್ಣ ಕತೆ, ನಾಟಕ ಗಳಂತೆ ಜೀವನಚರಿತ್ರೆಗಳು ಓದುಗರಿಗೆ ಆಕರ್ಷಕವಾಗಿವೆ; ಕೆಲವು ಜೀವನ ಚರಿತ್ರೆಗಳು ತುಂಬಾ ಜನಪ್ರಿಯವೆನಿಸಿವೆ. ಇಪ್ಪತ್ತನೆಯ ಶತಮಾನದ ಇಂಗ್ಲಿಷ್ ಸಾಹಿತ್ಯದಲ್ಲಿ ಜೀವನ ಚರಿತ್ರೆಯು ಒಂದು ಗಣ್ಯಸ್ಥಾನವನ್ನು ಪಡೆದಿದೆ.

ಹಿಂದಿನ ಕಾಲದಲ್ಲಿ ಸಾಹಿತ್ಯರಚನೆಗೆ ಬಹುಮಟ್ಟಿಗೆ ಧಾರ್ಮಿಕ ಆದರ್ಶಗಳು ಪ್ರೇರಕಶಕ್ತಿಯಾಗಿದ್ದುವು. ಈ ದೃಷ್ಟಿ ಯಿಂದ ಪಾಶ್ಚಾತ್ಯದೇಶದಲ್ಲಿ ಕೂಡ ನವೋದಯದ ಪೂರ್ವದಲ್ಲಿ ಶುದ್ಧ ಸಾಹಿತ್ಯರಚನೆಯಾಗಲಿಲ್ಲ. ಧಾರ್ಮಿಕ ವಿಚಾರದ ಪ್ರಚಾರ ಮತ್ತು ನೀತಿಪಾಠಗಳನ್ನು ಪ್ರಚುರಪಡಿಸುವುದು ಸಾಹಿತ್ಯದ ಗುರಿ ಯಾಗಿದ್ದಿತು. ನವೋದಯವು ಸಾಹಿತ್ಯದ ಮೇಲೆಯೂ ಪರಿ ಣಾಮವನ್ನುಂಟು ಮಾಡಿತು. ಸಮಾಜದಲ್ಲಿ ವ್ಯಕ್ತಿಯ ಹಿರಿಮೆಗೆ ಸ್ಥಾನ ದೊರಕಿತು. ಇದು ಜೀವನಚರಿತ್ರೆ ರಚನೆಗೆ ಸಹಾಯ ವಾಯಿತು. ೧೯ನೆಯ ಶತಮಾನದವರೆಗೂ ಅಲ್ಲಲ್ಲಿ ಒಂದೆರಡು ಜೀವನಚರಿತ್ರೆಗಳು ಕಾಣಿಸಿಕೊಂಡರೂ ಈ ಜೀವನಚರಿತ್ರೆಯ ಸಾಹಿತ್ಯ ಹುಲುಸಾಗಿ ಬೆಳೆಯಲಾರಂಭಿಸಿದುದು ೨೦ನೆಯ ಶತ ಮಾನದಿಂದ.

ಭಾರತದಲ್ಲಿ ಮೊದಲಿನಿಂದಲೂ ಆತ್ಮಚರಿತ್ರೆಗಳಾಗಲಿ ಜೀವನಚರಿತ್ರೆಗಳಾಗಲಿ ಅಷ್ಟಾಗಿ ರಚನೆಯಾಗಲಿಲ್ಲ. ಈ ಕೊರತೆಗೆ ಎರಡು ಕಾರಣಗಳನ್ನು ಕೊಡಬಹುದು :

(೧) ಇತಿಹಾಸಪ್ರಜ್ಞೆಯ ಅಭಾವ. (೨) ಭಾರತೀಯರ ಜೀವನದೃಷ್ಟಿ.

ಭಾರತೀಯರು ವ್ಯಕ್ತಿಗೆ ಎಂದೂ ಪ್ರಾಮುಖ್ಯತೆಯನ್ನು ನೀಡಿರಲಿಲ್ಲ. ವ್ಯಕ್ತಿಯು ಸಮಾಜದ ಅವಿಭಾಜ್ಯ ಅಂಗವೆಂದು ತಿಳಿಯಲಾಗಿತ್ತು. ಹೀಗಾಗಿ, ವ್ಯಕ್ತಿವಾದಕ್ಕೆ ಭಾರತದಲ್ಲಿ ಪುರಸ್ಕಾರವಿರಲಿಲ್ಲ. ಇದರ ಜೊತೆಗೆ ವ್ಯಕ್ತಿ ಮತ್ತು ಇಡೀ ಸಮಾಜವೇ ದೇವರ ಎದುರಿಗೆ ಮಹತ್ವದ್ದಾಗಿ ತೋರಲಿಲ್ಲ. ಹೀಗಾಗಿ ನಮ್ಮ ಕವಿಗಳು ತಮ್ಮ ಜೀವನದ ಬಗೆಗೆ ಹೆಚ್ಚಾಗಿ ಬರೆದುಕೊಳ್ಳಲಿಲ್ಲ. ಇದಕ್ಕೆ ಕೆಲವು ಅಪವಾದಗಳಿರಬಹುದು. ಸಾಮಾನ್ಯವಾಗಿ ಕವಿಗಳು ತಮ್ಮ ಜೀವನಚರಿತ್ರೆಗಾಗಲಿ, ಇತರರ ಜೀವನಚರಿತ್ರೆಗಾಗಲಿ ಕೊಡಬೇಕಾದಷ್ಟು ಪ್ರಾಮುಖ್ಯತೆಯನ್ನು ಕೊಡಲಿಲ್ಲ. ಹೀಗಾಗಿ, ಎಷ್ಟೋ ಮಹಾಕವಿಗಳ ವಿಷಯದಲ್ಲಿ ನಮಗೆ ಸಾಕಷ್ಟು ವಿವರಗಳು ದೊರೆಯುವುದಿಲ್ಲ.

ಕನ್ನಡ ಸಾಹಿತ್ಯಕ್ಕೂ ಮೇಲಿನ ಮಾತುಗಳು ಅನ್ವಯಿಸುತ್ತವೆ. ಆದರೆ, ಅನೇಕ ವೀರಶೈವ ಕವಿಗಳು ಶರಣರನ್ನು ಕುರಿತು ಪುರಾಣಗಳನ್ನೂ ಚರಿತ್ರೆಗಳನ್ನೂ ಕಾವ್ಯರೂಪದಲ್ಲಿ ಬರೆದಿದ್ದಾರೆ. ಆದರೆ, ಇವುಗಳಲ್ಲಿ ಯಾವುದು ಪುರಾಣ, ಯಾವುದು ಚರಿತ್ರೆ ಎಂದು ಬೇರ್ಪಡಿಸುವುದು ಕಠಿಣವಾದ ಕೆಲಸ. ಹರಿಹರನು ರಚಿಸಿರುವ 'ಬಸವರಾಜದೇವರ ರಗಳೆ' ಮುಂತಾದ ಕೃತಿಗಳು, ಚಾಮರಸನು ರಚಿಸಿರುವ ಪ್ರಭುಲಿಂಗಲೀಲೆ, ವಿರೂಪಾಕ್ಷಪಂಡಿತನು ಬರೆದಿರುವ ಚನ್ನಬಸವಪುರಾಣ, ಭೀಮಕವಿಯ ಬಸವಪುರಾಣ ಮುಂತಾದ ವೀರಶೈವ ಪುರಾಣಗಳಲ್ಲಿ ವ್ಯಕ್ತಿಜೀವನ ಚಿತ್ರಗಳನ್ನು

ಕಾಣಬಹುದು. ಇಲ್ಲಿ ವ್ಯಕ್ತಿಯ ಜೀವನಸಂಗತಿಗಳನ್ನು ತಿಳಿಸುವುದಕ್ಕಿಂತಲೂ ಅವರು ಮೆರೆದ ಪವಾಡಗಳನ್ನು ಬಣ್ಣಿಸುವುದೇ ಕವಿಗಳ ಮುಖ್ಯ ಉದ್ದೇಶವಾಗಿತ್ತು.

ಕೆಲವು ಕವಿಗಳು ತಮ್ಮ ಕಾವ್ಯಗಳನ್ನು ಚರಿತ್ರೆಯೆಂದೇ ಕರೆದಿದ್ದಾರೆ. ಉದಾಹರಣೆಗೆ ಸಿಂಗಿರಾಜನ 'ಅಮಲಬಸವಚರಿತೆ', ಸಿದ್ಧನಂಜೇಶನ 'ರಾಘವಾಂಕಚರಿತೆ', ರಾಘವಾಂಕನ 'ಸಿದ್ಧರಾಮಚಾರಿತ್ರ', ಮುಂತಾದವುಗಳನ್ನು ಇಲ್ಲಿ ಉಲ್ಲೇಖಿಸಬಹುದು. ಆಧುನಿಕ ಅರ್ಥದಲ್ಲಿ ಇವು ಶುದ್ಧ ಜೀವನಚರಿತ್ರೆಯಾಗಲಾರವು. ಏಕೆಂದರೆ, ಇಲ್ಲಿ ಐತಿಹಾಸಿಕ ಸಂಗತಿಗಳೊಡನೆ ಪೌರಾಣಿಕ ನಿರೂಪಣೆಯು ಇದೆ. ಎರಡನೆಯದಾಗಿ, ಇವು ಗದ್ಯರೂಪದಲ್ಲಿಲ್ಲ. ಆದಾಗ್ಯೂ ಐತಿಹಾಸಿಕ ವ್ಯಕ್ತಿಗಳನ್ನು ಕುರಿತು ವೀರಶೈವ ಕವಿಗಳು ಗ್ರಂಥಗಳನ್ನು ರಚನೆಮಾಡಿ, ಒಂದು ಹೊಸ ಮಾರ್ಗವನ್ನು ಹಾಕಿದರು. ಶಿವಭಕ್ತಿಯ ಪ್ರಾಶಸ್ತ್ಯವೇ ಈ ಕವಿಗಳ ಪ್ರಥಮ ಗುರಿಯಾಗಿದ್ದರೂ ವ್ಯಕ್ತಿಗಳ ಹಿರಿಮೆಯನ್ನೂ ಚಿತ್ರಿಸುವ ಪ್ರಯತ್ನ ಇವರಿಂದ ನಡೆಯಿತು.

ಈ ಕವಿಗಳು ಸಾಹಿತಿಗಳಾಗಿದ್ದರೇ ವಿನಾ ಚರಿತ್ರಕಾರರಾಗಿರಲಿಲ್ಲ. ಅಂತೆಯೇ ಇಲ್ಲಿ ಐತಿಹಾಸಿಕ ಮತ್ತು ಪೌರಾಣಿಕ ಸಂಗತಿಗಳು ಕೂಡಿಕೊಂಡಿವೆ. ಒಟ್ಟಿನಲ್ಲಿ ಹಳೆಯ ಕನ್ನಡ ಸಾಹಿತ್ಯವನ್ನು ಅವಲೋಕಿಸಿದರೆ ಶ್ರೀ ಬಸವೇಶ್ವರ, ಶ್ರೀ ಪ್ರಭುದೇವ, ಶ್ರೀ ಸಿದ್ಧರಾಮ ಮತ್ತು ಅಕ್ಕಮಹಾದೇವಿ ಮುಂತಾದ ಐತಿಹಾಸಿಕ ವ್ಯಕ್ತಿಗಳನ್ನು ಕುರಿತು ಕಾವ್ಯರಚನೆಯಾದುದು ಕನ್ನಡ ಸಾಹಿತ್ಯದ ವಿನೂತನ ಬೆಳವಣಿಗೆ ಎನ್ನಬಹುದು.

ಇಂದಿಗೂ ಕೂಡ ಭಾರತದಲ್ಲಿ ಆತ್ಮಚರಿತ್ರೆಗಳಂತೆ ಜೀವನ ಚರಿತ್ರೆಗಳ ಅಭಾವವು ಎದ್ದು ಕಾಣುತ್ತಿದೆ. ಈ ಮಾತು ಭಾರತ ದಲ್ಲಿರುವ ಎಲ್ಲ ಭಾಷಾಸಾಹಿತ್ಯಗಳಿಗೂ ಅನ್ವಯಿಸುತ್ತದೆ. ವ್ಯಕ್ತಿ ವಾದ, ಐತಿಹಾಸಿಕ ಪ್ರಜ್ಞೆ, ಲೌಕಿಕದೃಷ್ಟಿ, ಪ್ರಜಾಪ್ರಭುತ್ವದ ವಿಕಾಸ ಮತ್ತು ಆಧುನೀಕರಣಗಳು ಹೆಚ್ಚಾದಂತೆಲ್ಲ ವ್ಯಕ್ತಿಯನ್ನು ಕುರಿತು ಜೀವನಚರಿತ್ರೆಗಳು ಉದಯಿಸಬಹುದಾಗಿದೆ. ಇದಕ್ಕಾಗಿ ನಾವು ನಿರಾಶರಾಗಬೇಕಾಗಿಲ್ಲ. ಭಾರತದಲ್ಲಿ ಮೊಟ್ಟಮೊದಲು ಸ್ಮಿಥ್‌ನು 'ಅಕಬರ'ನನ್ನು ಕುರಿತು ಇಂಗ್ಲಿಷಿನಲ್ಲಿ ಜೀವನಚರಿತ್ರೆ ಯನ್ನು ಬರೆದನು. ಸುಪ್ರಸಿದ್ಧ ಇತಿಹಾಸವೇತ್ತ ಯದುನಾಥ ಸರ್ಕಾರ್‌ರವರು ಶಿವಾಜಿ ಹಾಗೂ ಅವರಂಗಜೇಬರನ್ನು ಕುರಿತು ಜೀವನಚರಿತ್ರೆಗಳನ್ನು ರಚಿಸಿದರು. ಇತ್ತೀಚೆಗೆ ಜೀವನಚರಿತ್ರೆಗಳು ಹೆಚ್ಚುಹೆಚ್ಚಾಗಿ ಬರತೊಡಗಿವೆ. ಇವುಗಳಲ್ಲಿ ಶ್ರೀ ರಾಮಗೋಪಾ ಲರು 'ತಿಲಕ'ರನ್ನು ಕುರಿತು ಬರೆದ ಗ್ರಂಥ, ಶ್ರೀ ತೆಂಡೂಲಕರರು 'ಗಾಂಧಿ'ಯವರನ್ನು ಕುರಿತು ಬರೆದ ಗ್ರಂಥಗಳು, ಶ್ರೀ ನಂದಾ ರವರು ಗಾಂಧಿಯವರನ್ನು ಕುರಿತು ಬರೆದ ಗ್ರಂಥ, ಶ್ರೀ ತಾಮ್ಹಣ ಕರರು ಝಾಂಸಿಯ ರಾಣಿಯನ್ನು ಕುರಿತು ಬರೆದ ಗ್ರಂಥ, ಶ್ರೀ ಫ್ರ್ಯಾಂಕ್ ಮೊರಾಯಿಸರವರು ನೆಹರೂರವರನ್ನು ಕುರಿತು ಬರೆದ ಗ್ರಂಥ, ಶ್ರೀ ಧನಂಜಯ ಕೀರ್‌ರವರು ಅಂಬೇಡಕರರನ್ನು ಕುರಿತು ಬರೆದ ಗ್ರಂಥ, ಶ್ರೀ ಜಾರ್ಜರವರು ಕೃಷ್ಣಮೆನನ್ನರನ್ನು ಕುರಿತು ಬರೆದ ಗ್ರಂಥಗಳನ್ನು ಉಲ್ಲೇಖಿಸಬಹುದು. ಭಾರತದಲ್ಲಿ ಕೂಡ ಸಾಹಿತಿಗಳು ರಚಿಸಿರುವ ಜೀವನಗ್ರಂಥಗಳು ವಿರಳವೆಂದೇ ಹೇಳಬೇಕು. ಶ್ರೀ ಡಿ. ಎಫ್. ಕಾರಕರವರು ಬರೆದಿರುವ Out of Dust ಎಂಬ ಕೃತಿಯು ಉತ್ತಮ ಗ್ರಂಥವಾಗಿದೆ.

ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಪಾಶ್ಚಾತ್ಯ ಪ್ರಭಾವ ಉಂಟಾದ ಮೇಲೆ ಸಾಹಿತ್ಯದ ಹೊಸ ಪ್ರಕಾರಗಳುಂಟಾದರೂ ಜೀವನಚರಿತ್ರಾತ್ಮಕ ಸಾಹಿತ್ಯ ಅಷ್ಟಾಗಿ ಬೆಳೆದಿಲ್ಲ. ಇದು ಮೊದಲೇ ತಿಳಿಸಿರುವಂತೆ ಕೇವಲ ಕನ್ನಡ ಸಾಹಿತ್ಯದ ಕೊರತೆ ಮಾತ್ರವಾಗಿರದೆ ಇಡೀ ಭಾರತೀಯ ಸಾಹಿತ್ಯಕ್ಕೇ ಅನ್ವಯಿಸುತ್ತದೆ. ಕನ್ನಡದಲ್ಲಿ ಬಂದಿರುವ ಕೆಲವೇ ಜೀವನಚರಿತ್ರೆಗಳಲ್ಲಿ ಶ್ರೀ ಮಾಸ್ತಿಯವರು ರಾಮಕೃಷ್ಣ ಪರಮಹಂಸರನ್ನು ಕುರಿತು ಬರೆದ ಕೃತಿ, ಶ್ರೀ ಡಿ. ವಿ. ಗುಂಡಪ್ಪನವರು ಗೋಪಾಲಕೃಷ್ಣ ಗೋಖಲೆಯವರನ್ನು ಕುರಿತು ಬರೆದ ಕೃತಿ, ಶ್ರೀ ಸಿ. ಕೆ. ವೆಂಕಟರಾಮಯ್ಯನವರು ಮೈಸೂರ ಮಹಾರಾಜರನ್ನು ಕುರಿತು ಬರೆದ ಗ್ರಂಥ, ಶ್ರೀ ಕೆ. ವಿ. ಪುಟ್ಟಪ್ಪ ನವರು ಸ್ವಾಮೀ ವಿವೇಕಾನಂದರನ್ನು ಕುರಿತು ಬರೆದ ಗ್ರಂಥ, ಶ್ರೀ ಎಮ್. ಆರ್. ಶ್ರೀನಿವಾಸಮೂರ್ತಿಯವರು ಭಕ್ತಿಭಾಂಡಾರಿ ಬಸವಣ್ಣನವರನ್ನು ಕುರಿತು ಬರೆದ ಗ್ರಂಥ ಇವುಗಳು ಉತ್ತಮ ಜೀವನಚರಿತ್ರೆಗಳಾಗಿವೆ.

ಈ ಹಿನ್ನೆಲೆಯಲ್ಲಿ ಶ್ರೀ ಹರ್ಡೇಕರ ಮಂಜಪ್ಪನವರ ಕಾಣಿಕೆ ಯನ್ನು ನಾವು ಪರಿಶೀಲಿಸಬೇಕು. ಶ್ರೀ ಮಂಜಪ್ಪನವರು ಬಸವ ಚರಿತ್ರೆ, ಮಹಾತ್ಮಾಗಾಂಧಿಯವರ ಚರಿತ್ರೆ, ಬುದ್ಧ ಚರಿತ್ರೆ, ಲಿಂಗ ರಾಜರ ಚರಿತ್ರೆ, ವಾರದ ಮಲ್ಲಪ್ಪನವರ ಚರಿತ್ರೆಗಳನ್ನು ಬರೆದು ಪ್ರಕಟಿಸಿದರು. ಅವರ ಶ್ರೀ ಬಸವಚರಿತ್ರೆಯನ್ನು ಕುರಿತು ಈಗಾಗಲೇ ಬೇರೆ ಭಾಗದಲ್ಲಿ ವಿಮರ್ಶಿಸಲಾಗಿದೆ. ಬುದ್ಧ ಚರಿತ್ರೆ ಯನ್ನು ಮಂಜಪ್ಪನವರು ಕನ್ನಡಿಗರಿಗೆ ಅರ್ಪಿಸಿದ್ದು ಯಥೋಚಿತ ವಾಗಿದೆ. ಬುದ್ಧನು ಭರತಖಂಡದ ಮಹಾಪುರುಷರಲ್ಲೊಬ್ಬನು.

ಇಷ್ಟೇ ಏಕೆ, ಇಡೀ ಪ್ರಪಂಚಕ್ಕೆ ಬೆಳಕನ್ನು ತೋರಿದ ಮಹಾ ವಿಭೂತಿಪುರುಷನೆಂಬುದನ್ನು ಮಂಜಪ್ಪನವರು ಸ್ಪಷ್ಟವಾಗಿ ತಿಳಿಯಪಡಿಸಿದ್ದಾರೆ. ಬುದ್ಧನು ಭಾರತೀಯರಿಗೆ ಪೂಜ್ಯನಾಗಿರುವಂತೆ ಮಹಾತ್ಮಾಗಾಂಧಿಯವರು ಕೂಡ ಜಗದ್ವಂದ್ಯವ್ಯಕ್ತಿ ಎಂಬುದನ್ನು ತಮ್ಮ ಕೃತಿಯ ಮುಖಾಂತರ ಮನವರಿಕೆಮಾಡಿ ಕೊಟ್ಟಿದ್ದಾರೆ.

ಶ್ರೀ ಮಂಜಪ್ಪನವರು ಕರ್ನಾಟಕದ ಇಬ್ಬರು ತ್ಯಾಗಜೀವಿಗಳ ಜೀವನಚರಿತ್ರೆಗಳನ್ನು ರಚಿಸಿ, ಅವರ ಆದರ್ಶವನ್ನು ಕನ್ನಡಿಗರ ಮುಂದೆ ಇಟ್ಟಿದ್ದಾರೆ. ಶ್ರೀ ಲಿಂಗರಾಜರ ಉದಾರವಾದ ಕೊಡುಗೆಯಿಂದ ಕನ್ನಡನಾಡಿನಲ್ಲಿ ಶಿಕ್ಷಣ ಸಸಿಯು ಚಿಗುರಿ ಇಂದು ಉತ್ತಮೋತ್ತಮ ಫಲಗಳನ್ನು ಕೊಡಹತ್ತಿದೆ. ಶ್ರೀ ವಾರದ ಮಲ್ಲಪ್ಪನವರ ಸಾತ್ವಿಕಜೀವನ, ಧರ್ಮಬುದ್ಧಿ ಹಾಗು ಅವರ ಮಾನವೀಯ ಗುಣಗಳು ಎಂದೆಂದಿಗೂ ಅನುಕರಣೀಯವೇ. ಕನ್ನಡ ಮಹಾಪುರುಷರಿಬ್ಬರ ಜೀವನಸಾಧನೆಗಳನ್ನು ತಿಳಿಸುವ ಇವೆರಡು ಗ್ರಂಥಗಳು ಜೀವನಚರಿತ್ರೆಗಳಾಗಿವೆ. ಇಲ್ಲಿ ಶ್ರೀ ಮಂಜಪ್ಪನವರು, ಇಬ್ಬರು ವ್ಯಕ್ತಿಗಳು ತಾವು ಹುಟ್ಟಿ ಬೆಳೆದ ಪರಿಸರದಲ್ಲಿ ಹೇಗೆ ಒಂದು ಆದರ್ಶವನ್ನು ಸಾಧಿಸಿದರು ಎಂಬುದನ್ನು ಮನಂಬುಗುವಂತೆ ವಿವರಿಸಿದ್ದಾರೆ. ಈ ಎರಡು ಪುಸ್ತಕಗಳಲ್ಲಿ ವ್ಯಕ್ತಿಗಳ ಹಿರಿಮೆಯನ್ನೂ ನಮ್ಮ ನಾಡಿನ ಚರಿತ್ರೆಯನ್ನೂ ನಾವು ಅರಿಯಬಹುದಾಗಿದೆ. ಬುದ್ಧ ಮತ್ತು ಗಾಂಧೀಜಿ ಮೊದಲಾದ ವ್ಯಕ್ತಿಗಳನ್ನು ಬರೆದ ಮಂಜಪ್ಪನವರು ಕನ್ನಡನಾಡಿನಲ್ಲಿಯೆ ಹುಟ್ಟಿ, ಬೆಳೆದು, ಸಫಲ ಜೀವನವನ್ನು ನಡೆಸಿದ ಕನ್ನಡನಾಡಿನ ಇಬ್ಬರು

ಹಿರಿಯ ವ್ಯಕ್ತಿಗಳನ್ನು ಕುರಿತೂ ಬರೆದರು. ಇದು ಅವರ ಸ್ವಾಭಿಮಾನಕ್ಕೆ ಸಾಕ್ಷಿಯಲ್ಲವೆ ? ನಮ್ಮವರಲ್ಲಿದ್ದ ಯೋಗ್ಯತೆಯನ್ನು ಹುಡುಕಿ ಗೌರವಿಸುವ ಈ ಉದಾರ ಗುಣ ಕನ್ನಡಿಗರಲ್ಲಿ ಬೆಳೆದಷ್ಟು ಕನ್ನಡನಾಡಿಗೆ ಒಳ್ಳೆಯದು. ಅಂತೂ ಮಂಜಪ್ಪನವರು ಬರೆದು ಪ್ರಕಟಿಸಿದ ಈ ಜೀವನಚರಿತ್ರೆಗಳು ಕನ್ನಡ ಸಾಹಿತ್ಯಕ್ಕೆ ಅಮೋಘವಾದ ಕಾಣಿಕೆಗಳಾಗಿವೆ.

## ಮಕ್ಕಳ ಸಾಹಿತ್ಯ

ದಾವಣಗೆರೆಯಲ್ಲಿದ್ದಾಗಲೇ ಶ್ರೀ ಮಂಜಪ್ಪನವರು ಬರೆದ 'ಬುದ್ಧಿಯ ಮಾತು' ಮುಂತಾದ ಕೆಲವು ಪುಸ್ತಕಗಳು ಯುವಕರು ಮತ್ತು ಮಕ್ಕಳೂ ಕೂಡ ಓದಿ ಪ್ರಯೋಜನ ಹೊಂದಬಹುದಾದ ಪುಸ್ತಕಗಳಾಗಿದ್ದವು. ಆದರೆ ಮಂಜಪ್ಪನವರು ಮಕ್ಕಳಿಗಾಗಿಯೇ ಒಂದು ಪ್ರತ್ಯೇಕ ಸಾಹಿತ್ಯಮಾಲೆಯನ್ನು ಪ್ರಾರಂಭಿಸಿ ಅನೇಕ ಚಿಕ್ಕ ಪುಸ್ತಕಗಳನ್ನು ತಾವು ಬರೆದು ಪ್ರಕಟಿಸಿದರಲ್ಲದೆ ಬೇರೆಯವರಿಂದಲೂ ಕೆಲವನ್ನು ಬರೆಯಿಸಿದರು. ಮಕ್ಕಳ ಶಿಕ್ಷಣವು ಬಹು ಮುಖ್ಯವಾದುದೆಂಬುದನ್ನು ಅರಿತ ಮಂಜಪ್ಪನವರು ಅನೇಕ ಬೋಧಪ್ರದವಾದ ಪುಸ್ತಕಗಳನ್ನು ಬರೆದರು. ವಿದ್ಯಾರ್ಥಿಗಳ ಎಳೆಯ ವಯಸ್ಸಿನಲ್ಲಿ ಅವರ ಮನಸ್ಸನ್ನು ತಿದ್ದಬೇಕೆಂಬ ಹಂಬಲದಿಂದ ಬರೆದ ಈ ಪುಸ್ತಕಗಳು ತುಂಬಾ ಜನಪ್ರಿಯವಾದುವು. ಈ ಗ್ರಂಥದ ಇನ್ನೊಂದು ಭಾಗದಲ್ಲಿ ಈಗಾಗಲೇ ಮಕ್ಕಳ ಸಾಹಿತ್ಯ ಮಾಲೆಯನ್ನು ಸ್ಥಾಪಿಸುವುದರಲ್ಲಿ ಮೊದಲಿಗರಾದ ಮಂಜಪ್ಪನವರ ಕಾಣಿಕೆಯು ಎಷ್ಟು ಪ್ರಾಮುಖ್ಯವಾದುದು ಎಂಬುದನ್ನು ವಿವರವಾಗಿ ತಿಳಿಸಲಾಗಿದೆ. ಕೇವಲ ಪ್ರಬುದ್ಧರಿಗೆ ಮತ್ತು

ವಯಸ್ಕರಿಗೆ ಮಾತ್ರ ಗ್ರಂಥಗಳನ್ನು ಬರೆದು ಸುಮ್ಮನೆ ಕುಳಿತು ಕೊಳ್ಳದೆ ಮಕ್ಕಳಿಗೂ ಕೂಡ ತಕ್ಕ ಪುಸ್ತಕಗಳನ್ನು ಬರೆಯುವ ಕೆಲಸಕ್ಕೆ ಕೈಹಾಕಿದ ಅವರ ಯೋಜನೆ ಪ್ರಶಂಸನೀಯವಾದುದು. ಆದರೆ ಅಂದಿನ ಅವರು ಮಕ್ಕಳಿಗಾಗಿ ಬರೆದ ಪುಸ್ತಕಗಳಲ್ಲಿ ಇಂದಿನ ಮಕ್ಕಳ ಸಾಹಿತ್ಯದಲ್ಲಿರುವಂತೆ ಚಿತ್ರಗಳಿರಲಿಲ್ಲ. ಮುದ್ರಣ ಕಲೆ ಯಲ್ಲಿ ಹಿಂದುಳಿದ ಆಗಿನ ಕಾಲದಲ್ಲಿ ಇಂತಹ ಕೊರತೆಗಳಿದ್ದುದು ಆಶ್ಚರ್ಯವೇನಲ್ಲ.

**ಜ್ಞಾನೋದಯ ಗ್ರಂಥಮಾಲೆ :** ಮಕ್ಕಳ ಮಾಲೆಯ ಜೊತೆಗೆ ಆಲಮಟ್ಟಿಯಿಂದ ಮಂಜಪ್ಪನವರು ಜ್ಞಾನೋದಯ ಗ್ರಂಥಮಾಲೆಯ ಮೂಲಕ ತಮ್ಮ ಗ್ರಂಥರಚನಾ ಕಾರ್ಯವನ್ನು ಮುಂದುವರಿಸಿದರು. 'ಶರಣಸಂದೇಶ' ಪತ್ರಿಕೆ ಮತ್ತು 'ಉದ್ಯೋಗ' ಪತ್ರಿಕೆಗಳನ್ನು ಆಲಮಟ್ಟಿಯಿಂದ ಪ್ರಕಟಿಸುವುದರ ಜೊತೆಗೆ ಪುಸ್ತಕ ವ್ಯವಸಾಯವನ್ನೂ ಅವರು ಮುಂದುವರಿಸಿದರು. ಧಾರ್ಮಿಕ ಗ್ರಂಥಗಳನ್ನು ಹಾಗೂ ರಾಷ್ಟ್ರೀಯ ಗ್ರಂಥಗಳನ್ನು ಬರೆಯುತ್ತ ಬಂದರು. ಇವುಗಳಲ್ಲಿ ಅವರ 'ಶುದ್ಧಿ ಮತ್ತು ಸಂಘಟನೆ' 'ಬಸವ ಬೋಧಾಮೃತ' ಎಂಬ ಕೃತಿಗಳೂ, 'ಹಿಂದುತ್ವ' ಎಂಬ ಅನುವಾದ ಗ್ರಂಥವೂ ಶ್ರೇಷ್ಠ ಕೃತಿಗಳಾಗಿವೆ. ತಮ್ಮ ಗ್ರಂಥಮಾಲೆಯಲ್ಲಿ ತಾವು ಬರೆದ ಗ್ರಂಥಗಳು ಪ್ರಕಟವಾಗುವುದರ ಜೊತೆಗೆ ಬೇರೆ ಗ್ರಂಥಮಾಲೆಯಲ್ಲಿಯೂ ಕೂಡ ಇವರ ಗ್ರಂಥ ಗಳು ಪ್ರಕಟವಾದುವು. ಧಾರವಾಡದ ಶ್ರೀ ಆಲೂರು ವೆಂಕಟ-ರಾಯರ 'ನವಜೀವನ' ಗ್ರಂಥಮಾಲೆಯ ನಾಲ್ಕನೆಯ ಕುಸುಮ ವಾಗಿ ಮಂಜಪ್ಪನವರು 'ಖಾದಿಶಾಸ್ತ್ರ'ವೆಂಬ ತಾತ್ವಿಕ ದೃಷ್ಟಿ ಯಿಂದ ಬರೆದ ಶ್ರೇಷ್ಠ ಗ್ರಂಥವೊಂದು ೧೯೩೩ ರಲ್ಲಿ ಪ್ರಕಟ

ವಾಯಿತು. ಕನ್ನಡನುಡಿಗೆ ಇಂತಹ ಗ್ರಂಥಗಳಿಷ್ಟಿದ್ದರೂ ಭೂಷಣ-ಪ್ರದ ಮತ್ತು ಸ್ವಾಗತಾರ್ಹ. ಖಾದಿಯ ಮಹತ್ವವನ್ನು ಕುರಿತು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ದೃಷ್ಟಿಗಳಿಂದ ಈ ಪುಸ್ತಕದಲ್ಲಿ ಮಂಜಪ್ಪನವರು ಬಹಳ ರಮ್ಯವಾಗಿ ಮನದಟ್ಟಾಗು ವಂತೆ ವಿಸ್ತಾರವಾಗಿ ಬರೆದಿದ್ದಾರೆ. ಶ್ರೀ ಆಲೂರು ವೆಂಕಟ-ರಾಯರು ಶ್ರೀ ಹರ್ಡೇಕರ ಮಂಜಪ್ಪನವರ ಈ ಗ್ರಂಥ 'ಒಂದು ಜ್ಞಾನದಾನದ ಕಾರ್ಯ'ವೆಂದು ಮುನ್ನುಡಿಯಲ್ಲಿ ಹೇಳಿದ್ದಾರೆ. ಮಂಜಪ್ಪನವರು ಕನ್ನಡಮಾತೆಗೆ ಅರ್ಪಿಸಿದ ರಾಷ್ಟ್ರೀಯ ಹಾಗೂ ವಿಚಾರಸಾಹಿತ್ಯದ ಮಾಲಿಕೆಯಲ್ಲಿ 'ಖಾದಿಶಾಸ್ತ್ರ'ವು ಒಂದು ಶ್ರೇಷ್ಠ ಕೃತಿಯಾಗಿದೆ. ಕನ್ನಡದೇವಿಗೆ ಮಂಜಪ್ಪನವರು ಅರ್ಪಿಸಿದ ಪುಸ್ತಕಮಾಲೆ ಎಂಬ ಕೊರಳಹಾರದಲ್ಲಿ 'ಖಾದಿಶಾಸ್ತ್ರ'ವೂ ಒಂದು ಅನರ್ಘ್ಯ ರತ್ನ.

೧೯೩೬ ರಲ್ಲಿ ಮಂಜಪ್ಪನವರು ತಾವು ಬರೆದ 'ಆತ್ಮಚರಿತ್ರೆ' ಯನ್ನು ಪ್ರಕಟಿಸಿದರು. ಈ ಗ್ರಂಥವನ್ನು ಕುರಿತು ಈಗಾಗಲೇ ಬೇರೆ ಕಡೆಯಲ್ಲಿ ಸಾಕಷ್ಟು ವಿವೇಚಿಸಲಾಗಿದೆ. ಇದೂ ಕೂಡ ಭಾರತೀಯ ರಾಷ್ಟ್ರೀಯ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಉತ್ತಮ ತರಗತಿಯ ಗ್ರಂಥವಾಗಿದೆ. ೧೯೪೩ ರಲ್ಲಿ ಶ್ರೀ ಬಸವ-ನಾಳರು, ಧಾರವಾಡದಲ್ಲಿ ಜರುಗಿದ ೨೫ ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧಿವೇಶನದಲ್ಲಿ ಸ್ವಾಗತ ಭಾಷಣ ಮಾಡುತ್ತಾ, ಹೊಸ ಸಾಹಿತ್ಯವನ್ನು ಕುರಿತು 'ಪ್ರತಿಯೊಬ್ಬ ಬರಹಗಾರನು ಜಾತಿ, ಮತ, ಪಂಥಗಳ ಸಂಕುಚಿತ ಭಾವನೆಗೆ ಸಿಲುಕದೆ ರಾಷ್ಟ್ರೀಯ ಸಾಹಿತ್ಯ ನಿರ್ಮಾಣಮಾಡುವ ಕಾರ್ಯದಲ್ಲಿ ತೊಡಗಬೇಕು'

ಎಂದು ಮನವಿ ಮಾಡಿದರು. ಆದರೆ ಈ ಹೊತ್ತಿಗೆ ಮಂಜಪ್ಪ ನವರು ಅಪಾರವಾದ ರಾಷ್ಟ್ರೀಯ ಸಾಹಿತ್ಯವನ್ನು ನಿರ್ಮಾಣ ಮಾಡಿದರು. ಇದು ಅತ್ಯಂತ ಅಭಿಮಾನಾಸ್ಪದವಾದ ಸಂಗತಿ ಯಾಗಿತ್ತೆಂಬುದರಲ್ಲಿ ಯಾವ ಅನುಮಾನವೂ ಇಲ್ಲ.

**ಪ್ರಗತಿ ಗ್ರಂಥಮಾಲೆ :** ತಮ್ಮ ಅರವತ್ತೊಂದನೆಯ ಹುಟ್ಟುಹಬ್ಬದ ಆಚರಣೆಯ ಸವಿನೆನಪಿಗಾಗಿ ಮಂಜಪ್ಪನವರು 'ಪ್ರಗತಿ ಗ್ರಂಥಮಾಲೆ' ಎಂಬ ಒಂದು ಹೊಸ ಗ್ರಂಥಮಾಲೆಯನ್ನು ಸ್ಥಾಪಿಸುವ ಉದ್ದೇಶವನ್ನಿಟ್ಟುಕೊಂಡು ಒಂದು ಯೋಜನೆಯನ್ನು ತಯಾರಿಸಿದ್ದರು. ಅವರು ೧೭–೯–'೪೫ ರಂದು ಈ ಬಗ್ಗೆ ಸವಿ-ಸ್ತಾರವಾದ ಒಂದು ವಿಜ್ಞಾಪನೆಯನ್ನು ಪ್ರಕಟಿಸಿದರು.

ಕನ್ನಡಿಗರ ದುರ್ದೈವದಿಂದ ಮಂಜಪ್ಪನವರ ಈ ಯೋಜನೆ ಅವರ ಅಕಾಲಿಕ ನಿಧನದಿಂದ ಕೈಗೂಡಲಿಲ್ಲ. ಕಟ್ಟುನಿಟ್ಟಾದ ಜೀವನ ಮತ್ತು ಅತಿಯಾದ ಪರಿಶ್ರಮದಿಂದ ಒಂದೇಸಮನೆ ದುಡಿ ಯುತ್ತಿದ್ದ ಶ್ರೀ ಮಂಜಪ್ಪನವರ ಆರೋಗ್ಯ ಅವರ ಅರವತ್ತನೆಯ ವಯಸ್ಸಿನ ವೇಳೆಗೆ ಅಷ್ಟಾಗಿ ಚೆನ್ನಾಗಿರಲಿಲ್ಲ. ರಕ್ತದ ಒತ್ತಡದಿಂದ ಅವರು ನರಳುತ್ತಿದ್ದರು. ತಮ್ಮ ಅರುವತ್ತೊಂದನೆಯ ಹುಟ್ಟು ಹಬ್ಬದ ದಿವಸ ತಾವೇ ರಚಿಸಿದ 'ಋಗ್ವೇದ ಸಾರ'ವೆಂಬ ಸುಮಾರು ೪೦೦ ಪುಟಗಳ ಗ್ರಂಥವನ್ನು ಪ್ರಕಟಿಸಬೇಕೆಂಬ ಅವರ ಆಶೆ ಅಂದು ನೆರವೇರಲಿಲ್ಲ. ಏಕೆಂದರೆ ಸಕಾಲದಲ್ಲಿ ಈ ಗ್ರಂಥ ಮುದ್ರಣವಾಗು ವುದು ಸಾಧ್ಯವಿರಲಿಲ್ಲ. ಅದಕ್ಕಾಗಿ ಅಂದು 'ಎಚ್ಚೆತ್ತ ಭಾರತ' ವೆಂಬ ಸುಮಾರು ೬೦ ಪುಟಗಳ ಚಿಕ್ಕ ಗ್ರಂಥವನ್ನು ಬರೆದು ಪ್ರಕಟಿ ಸಿದರು. ಇಲ್ಲಿ ಭಾರತ ಇತಿಹಾಸಗಳ ಸುಮಾರು ೫೦೦೦ ವರುಷ

ಗಳ ಪರಿಶೀಲನದ ವಿವೇಚನೆಯಿದೆ. ಇದೊಂದು ಅತ್ಯಂತ ವಿಚಾರ ಪೂರಿತವಾದ ಪುಸ್ತಕ. ಸ್ವತಂತ್ರ ಭಾರತದ ಕನಸನ್ನು ಕಾಣುತ್ತಿದ್ದ ಮಂಜಪ್ಪನವರು ಭಾರತವು ಹೇಗೆ ಮುಂದೆ ಪ್ರಗತಿಯಾಗಬೇಕೆಂಬು ದನ್ನು ಇಲ್ಲಿ ಚರ್ಚಿಸಿದ್ದಾರೆ. ರಾಷ್ಟ್ರೀಯ ಸಾಹಿತ್ಯವನ್ನು ರಚಿಸು ವುದರಲ್ಲಿಯೇ ತಮ್ಮ ಜೀವಮಾನವನ್ನೆಲ್ಲಾ ಕಳೆದ ಮಂಜಪ್ಪ ನವರು ತಾವು ಪ್ರಾಣ ಬಿಡುವುದಕ್ಕೆ ಮುನ್ನ "ಧೀರರಾಗಿರಿ, ಪವಿತ್ರ ರಾಗಿರಿ, ಸ್ವತಂತ್ರ ರಾಷ್ಟ್ರವೀರರಾಗಿರಿ" ಎಂಬ ದಿವ್ಯ ಸಂದೇಶವನ್ನು ನೀಡಿದರು. ಸಾಯುವ ಮನುಷ್ಯನ ತುಟಿಯ ಮೇಲೆ ಸತ್ಯ ಪವಡಿ ಸಿರುತ್ತದೆ ಎಂಬ ಇಂಗ್ಲಿಷ್ ನಾಣ್ಣುಡಿಯಿದೆ. ಮಹಾನುಭಾವ ಮಂಜಪ್ಪನವರು ಸಾಯುವ ಮುನ್ನ ಮಾತ್ರ ಸತ್ಯವನ್ನು ನುಡಿ ಯದೆ ಮೊದಲಿನಿಂದ ಕೊನೆಯವರೆಗೂ ರಾಷ್ಟ್ರಕ್ಕಾಗಿಯೇ ಬಾಳಿ ಬೆಳಗಿದರು. ಮೇಲಿನ ವಾಕ್ಯಗಳು ಅವರು ಬರೆದ ರಾಷ್ಟ್ರೀಯ ಗ್ರಂಥಗಳಷ್ಟೇ ಸ್ಫೂರ್ತಿದಾಯಕವಾಗಿವೆ. ಶ್ರೀ ಮಂಜಪ್ಪನವರಿಗೆ ರಾಷ್ಟ್ರೀಯತೆಯೇ ಜೀವನಸೂತ್ರವಾಗಿತ್ತು ಎಂಬುದನ್ನು ಎತ್ತಿ ತೋರಿಸುತ್ತದೆ. ಹೀಗೆ ಅನಂತಕಾಲ ಶ್ರೇಷ್ಠ ಗ್ರಂಥಗಳನ್ನು ಬರೆದು ವಿಚಾರಸಾಹಿತ್ಯ ಮತ್ತು ರಾಷ್ಟ್ರೀಯ ಸಾಹಿತ್ಯಗಳ ಶಿಲ್ಪಿ ಎನಿಸಿದ ಶ್ರೀ ಮಂಜಪ್ಪನವರ ಕನ್ನಡ ಸೇವೆಯು ಚಿರಸ್ಮರಣೀಯವಾದುದು. ಇಪ್ಪತ್ತನೆಯ ಶತಮಾನದ ಕನ್ನಡ ಗ್ರಂಥಕಾರರ ಮಾಲೆಯಲ್ಲಿ ಮಂಜಪ್ಪನವರ ಹೆಸರು ಉಜ್ವಲವಾಗಿ ಹೊಳೆಯುತ್ತಿದೆ. ಕನ್ನಡ ಜನಾಂಗಕ್ಕೆ ರಾಷ್ಟ್ರೀಯ ಸಾಹಿತ್ಯದ ಮೂಲಕ ಜ್ಞಾನದಾನ ಮಾಡಿ ಕನ್ನಡಿಗರಲ್ಲಿ ರಾಷ್ಟ್ರೀಯತೆಯ ವಿಚಾರಗಳನ್ನು ಮೊಳಗಿಸಿ ಕೀರ್ತಿ ಶೇಷರಾದ ಅವರ ಸೇವೆಯನ್ನು ನಾವು ಎಂದೆಂದೂ ಮರೆಯು ವಂತಿಲ್ಲ.

**ಜೀವನಸಾಧನೆ :** ಶ್ರೀ ಮಂಜಪ್ಪನವರ ಜೀವನಸಾಧನೆಯನ್ನು ಕುರಿತು ಚರ್ಚಿಸುವಾಗ ಅವರ ಜೀವನದ ಮೇಲೆ ಪರಿಣಾಮಕಾರಿಯಾದ ಪ್ರಭಾವವನ್ನುಂಟುಮಾಡಿದ ಕೆಲವು ಮುಖ್ಯ ಸಂಗತಿಗಳನ್ನು ಗಮನಿಸಬೇಕಾಗುತ್ತದೆ. ಬಡ ಕುಟುಂಬವೊಂದರಲ್ಲಿ ಜನಿಸಿ, ಕನ್ನಡನಾಡಿನ ಮೂಲೆಯೊಂದರಲ್ಲಿ ಮುಲ್ಕೀ ಶಿಕ್ಷಣವನ್ನು ಪಡೆದ ಇವರು ಉಚ್ಚ ಶಿಕ್ಷಣದ ಪ್ರಯೋಜನವನ್ನು ಹೊಂದುವ ಅವಕಾಶವಿರಲಿಲ್ಲ. ಕೇವಲ ಹದಿನೇಳನೆಯ ವಯಸ್ಸಿನಲ್ಲಿ ತಿಂಗಳಿಗೆ ಏಳು ರೂಪಾಯಿಗಳ ಸಂಬಳದ ಮೇಲೆ ಇವರು ಶಿಕ್ಷಕವೃತ್ತಿಯನ್ನು ಕೈಕೊಳ್ಳಬೇಕಾಯಿತು ಎಂದಮೇಲೆ ಇವರ ಅಂದಿನ ಆರ್ಥಿಕ ಸ್ಥಿತಿ-ಗತಿಗಳನ್ನು ಯಾರಾದರೂ ಊಹಿಸಬಹುದು. ಇವರಿಗೆ ಸಂಸ್ಕೃತ ಕಲಿಯುವ ಮತ್ತು ಹೆಚ್ಚಿನ ವ್ಯಾಸಂಗ ಮಾಡುವ ಉತ್ಸಾಹವಿದ್ದರೂ ಅಂದಿನ ಪರಿಸ್ಥಿತಿಯಲ್ಲಿ ಮುಲ್ಕೀ ಶಿಕ್ಷಣಕ್ಕಿಂತ ಮುಂದೆ ಹೋಗಲು ಸಾಧ್ಯವಿರಲಿಲ್ಲ.

ಮಂಜಪ್ಪನವರು ಬಡತನದಿಂದಾಗಿ ಲಗ್ನವಾಗಬಾರದೆಂದೂ ಕೂಡ ನಿಶ್ಚಯಿಸಿದರು. ಈ ಬಡತನವೇ ಅವರನ್ನು ಬ್ರಹ್ಮಚರ್ಯ ಜೀವನಕ್ಕೆ ಎಳೆದೊಯ್ದುದಲ್ಲದೆ ಅವರ ಸನ್ಯಾಸಜೀವನವೇ ಅವರ ಸರ್ವ ಚಟುವಟಿಕೆಗಳಿಗೂ ಮುಖ್ಯ ಪ್ರೇರಕಶಕ್ತಿಯಾಯಿತು. ಮಂಜಪ್ಪನವರು ಬ್ರಹ್ಮಚರ್ಯದ ಮಹತ್ವವನ್ನು ಅರಿತಿದ್ದರು. ಮತ್ತು ಬ್ರಹ್ಮಚರ್ಯೆಯನ್ನು ಕಟ್ಟುನಿಟ್ಟಿನಿಂದ ಪಾಲಿಸಿದರು. ಅವರ ಬಾಳು ಒಂದು ತಪಸ್ಸಿನಂತಿದ್ದು ಅವರು ಕೈಗೊಂಡ ಕಾರ್ಯಗಳಲ್ಲಿ ಅಚಲ ನಿರ್ಧಾರ, ಶ್ರದ್ಧೆ ಮತ್ತು ಕರ್ತವ್ಯನಿಷ್ಠೆಗಳನ್ನು ಕಾಣಬಹುದಾಗಿತ್ತು. ಬ್ರಹ್ಮಚರ್ಯದ ತೇಜಸ್ಸೇ ಅವರ

ನಡೆನುಡಿಗಳನ್ನು ರೂಪಿಸಿತು. ಸಾತ್ವಿಕರೂ, ನಿರಾಡಂಬರ ಸ್ವಭಾವದವರೂ ಆದ ಮಂಜಪ್ಪನವರು ವೈಯಕ್ತಿಕವಾದ ಮಹತ್ವಾಕಾಂಕ್ಷೆಯಿಂದ ಕೂಡಿರಲಿಲ್ಲ. ಹೀಗಾಗಿ ಅವರು ಪ್ರಸಿದ್ಧಿಗಾಗಲೀ, ಅಧಿಕಾರ, ಸ್ಥಾನಮಾನಗಳಿಗಾಗಲೀ ಆಶಿಸದೆ ಎಲೆಯ ಮರೆಯ ಹೂವಿನಂತೆ ಬಾಳಿ ಸೌರಭವನ್ನು ಸುತ್ತುಮುತ್ತಲೂ ಬೀರಿದರು. ಗಾಂಧೀಜಿ ಮಾರ್ಗದ ಆಚರಣೆಯಲ್ಲಿ ಕರ್ನಾಟಕದಲ್ಲಿ ಇವರ ಸರಿಸಮಾನರಾದವರು ಯಾರೂ ಇರಲಿಲ್ಲ. ಆದರೂ ತಮ್ಮ ವೈಯಕ್ತಿಕ ಹಿತಕ್ಕಾಗಿ ಪ್ರಯತ್ನಿಸಲಿಲ್ಲ. ಕಾಂಗ್ರೆಸ್ಸನ್ನು ಸೇರಿ ಅಧಿಕಾರಕ್ಕಾಗಿ ಇವರು ಪ್ರಯತ್ನಿಸಿದ್ದರೆ ಮಹತ್ವದ ಸ್ಥಾನವನ್ನು ಪಡೆಯುವುದು ಸಾಧ್ಯವಿದ್ದಿತು. ವ್ಯಾಪಾರೋದ್ಯೋಗಗಳಲ್ಲಿ ಕೈಹಾಕಿ ದುಡಿದಿದ್ದರೆ ಇವರೊಬ್ಬ ಧನಿಕ ವ್ಯಕ್ತಿಯಾಗುತ್ತಿದ್ದರು. ಎಲ್ಲರಂತೆ ಮದುವೆಮಾಡಿಕೊಂಡು ದಾಂಪತ್ಯಜೀವನವನ್ನು ನಡೆಸಿದ್ದರೆ ಅವರೇ ಹೇಳಿರುವಂತೆ : "ನಾನು ಈ ದಾರಿಯನ್ನು ಹಿಡಿಯದೇ ವಿವಾಹಿತನಾಗಿದ್ದರೆ ಜನಸಂಖ್ಯೆಯಲ್ಲಿ ನಾಲ್ಕೈದು ಹೆಚ್ಚಿಸಿ, ನಾಲ್ಕೈದು ಸಾವಿರ ರೂಪಾಯಿ ಕಾಯ್ದಿಟ್ಟು ತಿಂಗಳಿಗೆ ಹದಿನೈದು, ಇಪ್ಪತ್ತು ರೂಪಾಯಿ ವಿಶ್ರಾಂತಿ ವೇತನಹೊಂದುವ ಮಾಸ್ತರನಾಗಿರುತ್ತಿದ್ದೆನು." ಆದರೆ ಇಂತಹ ಆಕಾಂಕ್ಷೆಗಳಿಲ್ಲದ ಮಂಜಪ್ಪನವರು ಕಠಿಣವಾದ ನೈಷ್ಠಿಕ ಬ್ರಹ್ಮಚರ್ಯಜೀವನವನ್ನು ಸ್ವೀಕರಿಸಿ ನಿಷ್ಕಳಂಕವಾದ ಹಾಗೂ ಉದಾರಚಾರಿತ್ರ್ಯದ ಜೀವನವನ್ನು ನಡೆಸಿದರು. ಕಟ್ಟುನಿಟ್ಟಾದ ಆಹಾರ, ಸಾಧಾರಣ ಉಡುಗೆ, ಮಿತವ್ಯಯ, ಹೀಗೆ ಶಿಸ್ತಿನ ಜೀವನ ನಡೆಯಿಸುತ್ತಿದ್ದ ಈ ವ್ಯಕ್ತಿಯನ್ನು "ಕರ್ನಾಟಕದ ಗಾಂಧಿ" ಎಂದು ಜನ ಕರೆದರು.

ಬಂಗಾರದಂತಹ ಚೊಕ್ಕ ಜೀವನ, ಫಲಾಪೇಕ್ಷೆಯಿಲ್ಲದ ಕಾರ್ಯ ತತ್ಪರತೆ, ಸಕಲರ ಸೇವೆ ಮಾಡುವ ಆಕಾಂಕ್ಷೆ, ಉನ್ನತಮಟ್ಟದ ನೈತಿಕ ಬಲ, ಸಮಾಸತ್ವ, ಸೌಜನ್ಯ ಇವುಗಳಿಂದ ಶೋಭಿಸುತ್ತಿದ್ದ ಮಂಜಪ್ಪನವರ ಜೀವನ ನಿಜವಾಗಿಯೂ ಮಹಾತ್ಮಾ ಗಾಂಧಿ ಯುವರ ಜೀವನದಂತೆ ಲೋಕೋಪಕಾರಿ ಜೀವನವಾಗಿದ್ದಿತು. ಅವರು ನೈಷ್ಠಿಕ ಬ್ರಹ್ಮಚಾರಿಗಳಾಗಿ ಧಾರ್ಮಿಕ ಶ್ರದ್ಧೆಯನ್ನಿಟ್ಟು ಕೊಂಡು ರಾಷ್ಟ್ರಸೇವೆಯನ್ನು ಮಾಡಿದರು. ಅವರ ಜೀವನ ಸಾತ್ವಿಕವೂ, ಪರಿಶುದ್ಧವೂ, ಲೋಕಕಲ್ಯಾಣಕಾರಕವೂ ಆಗಿತ್ತು.

ಮಂಜಪ್ಪನವರ ಜೀವನದ ಮೇಲೆ ಪ್ರಭಾವ ಬೀರಿದ ಅಂಶ ಗಳಲ್ಲಿ ಭಾರತೀಯ ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಂಪರೆಗಳು ಬಹಳ ಮುಖ್ಯವಾದವು ಅವರು ಭಾರತೀಯ ಪರಂಪರೆಗಳ ಮೇಲೆ ಭದ್ರವಾಗಿ ನಿಂತು ರಾಷ್ಟ್ರಪೋಷಣೆಗೆ ಮತ್ತು ಸಮಾಜದ ಉದ್ಧಾರಕ್ಕೆ ಆಗತ್ಯವಾದ ಪಾಶ್ಚಾತ್ಯ ನಡೆವಳಿಕೆಗಳನ್ನು ಅಳವಡಿಸಿ ಕೊಳ್ಳುವ ವಿಚಾರವನ್ನು ಹೊಂದಿದ್ದರು. ಮಂಜಪ್ಪನವರ ಮೇಲೆ ಶ್ರೀ ಸ್ವಾಮಿ ರಾಮತೀರ್ಥರವರ ಜೀವನ ಮತ್ತು ಉಪನ್ಯಾಸ ಗಳು ಮಹತ್ವದ ಪರಿಣಾಮವನ್ನುಂಟುಮಾಡಿದುವು. ತಾರುಣ್ಯಾ ವಸ್ಥೆಯಲ್ಲಿದ್ದಾಗಲೇ ಅವರು ಸ್ವಾಮಿ ರಾಮತೀರ್ಥರವರ ಉಪ ನ್ಯಾಸಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದರು. ಸ್ವಾಮಿ ರಾಮತೀರ್ಥರವರ ವಿಚಾರಸರಣಿ ಚಿಕ್ಕಂದಿನಲ್ಲಿಯೇ ಮಂಜಪ್ಪ ನವರ ಮೇಲೆ ಹೆಚ್ಚು ಪರಿಣಾಮವನ್ನುಂಟುಮಾಡಿತು. ಇವರಿಬ್ಬರ ಜೀವನದಲ್ಲಿ ಸಾಕಷ್ಟು ಹೋಲಿಕೆಯನ್ನು ಕಾಣಬಹುದು. ಮಂಜಪ್ಪ ನವರ ಬದುಕಿನ ಮೇಲೆ ಹೆಚ್ಚು ಪ್ರಭಾವ ಬೀರಿದ ಇನ್ನೊಂದು ಅಂಶವೆಂದರೆ ಶಿವಶರಣರ ನಡೆನುಡಿಗಳು. ಶಿವಶರಣರ ಕಾಯಕ

ನಿಷ್ಠೆಯನ್ನರಿತ ಮಂಜಪ್ಪನವರಿಗೆ ಜೀವನವೇ ಕಾಯಕವಾಯಿತು. ಕರ್ಮಯೋಗದ ಪ್ರಭಾವ ಕ್ಕೊಳಗಾಗಿದ್ದ ಇವರ ಬಾಳಿಗೆ ವಚನ ಕಾರರ ತತ್ವಗಳು ದಾರಿದೀಪವಾಗಿ ಪರಿಣಮಿಸಿದವು. ಬಸವೇಶ್ವರರ ಜೀವನ ಮತ್ತು ಬೋಧೆಗಳಿಂದ ಮಂಜಪ್ಪನವರು ಬಹಳ ವಾಗಿ ಪರಿವರ್ತನ ಹೊಂದಿದರು. ಸತ್ಯಾಗ್ರಹ, ಖಾದಿ, ಉದ್ಯೋಗ ಮೊದಲಾದ ಲೌಕಿಕ ಚಟುವಟಿಕೆಗಳಲ್ಲಿ ತೊಡಗಿದ್ದ ಇವರು ಶರಣರ ಬಾಳಿನಿಂದ ಸ್ಫೂರ್ತಿ ಪಡೆದದ್ದರಿಂದಲೇ 'ಶರಣಸಂದೇಶ' ವೆಂಬ ಕನ್ನಡ ವಾರಪತ್ರಿಕೆಯನ್ನು ಹೊರಡಿಸಿದರು. ಆಲಮಟ್ಟಿಯ ಅವರ ಜೀವನವಂತೂ ಶರಣರ ಜೀವನವನ್ನು ಹೋಲುತ್ತಿತ್ತು. ಅಂತೇ ಅವರ ಲೆಕ್ಕಣಿಕೆಯಿಂದ ಶಿವಶರಣರ ತತ್ವಗಳನ್ನು ಕುರಿತು ಹಲವಾರು ಗ್ರಂಥಗಳು ಹೊರಬಿದ್ದವು. 'ಬಸವಬೋಧಾಮೃತ' ಹಾಗೂ 'ಪ್ರಮಥಾಚರ್ಯದೀಪಿಕೆ', 'ಸುಬೋಧಸಾರ' (ಸಂಪಾದಿತ) ವಚನಕಾರರ ಸಮಾಜರಚನೆ (ಸಂಪಾದಿತ) ಮೊದಲಾದ ಪುಸ್ತಕಗಳು ಶರಣರ ನಡೆನುಡಿಗಳು, ಅವರ ಜೀವನ ಮತ್ತು ಗ್ರಂಥ ರಚನೆಯ ಮೇಲೆ ಪ್ರಭಾವ ಬೀರಿದ್ದುದಕ್ಕೆ ನಿದರ್ಶನಗಳಾಗಿವೆ.

ಶಿವಶರಣರ ತತ್ವಗಳಿಗೆ ಮಾರುಹೋದ ಮಂಜಪ್ಪನವರು ಸಾಮಾಜಿಕ, ರಾಜಕೀಯ ವಿಷಯಗಳಲ್ಲಿ ನಿರಾಸಕ್ತಿ ವಹಿಸಲಿಲ್ಲ. ಆದಿಜನರ ಸುಧಾರಣೆ. ಹಿಂದು ಸಂಘಟನೆ, ಕರ್ನಾಟಕ ಏಕೀಕರಣ, ಭಾರತೀಯರ ಸ್ವಾತಂತ್ರ್ಯ ಮೊದಲಾದ ಸಾರ್ವಜನಿಕ ಸಮಸ್ಯೆಗಳಲ್ಲಿ ಆಸಕ್ತಿಯನ್ನು ವಹಿಸಿ ತಮ್ಮ ಅಭಿಪ್ರಾಯಗಳನ್ನು ನಿರ್ಭಯವಾಗಿ ವ್ಯಕ್ತಪಡಿಸುತ್ತಿದ್ದರು. ಅವರ ಅಭಿಪ್ರಾಯಗಳು ನಿರ್ದಾಕ್ಷಿಣ್ಯವೂ, ವಿಧಾಯಕವೂ ಆಗಿರುತ್ತಿದ್ದವು. ಕೇವಲ ಜನ ವನ್ನು ಮೆಚ್ಚಿಸುವದಕ್ಕೆ ಒಲೆಯದೆ ನ್ಯಾಯಸಿಷ್ಠುರವಾಗಿ

ನುಡಿಯುತ್ತಿದ್ದ ಅವರು ಅಭಿನವ ಸರ್ವಜ್ಞರೇ ಸರಿ. ಮಂಜಪ್ಪ ನವರು ತಮ್ಮದೇ ಆದ ವಿಚಾರಸ್ವಾತಂತ್ರ್ಯವನ್ನೂ. ಪ್ರತಿ ಯೊಂದನ್ನೂ ತರ್ಕದ ಒರೆಗಲ್ಲಿಗೆ ಹಚ್ಚಿ ಸತ್ಯವನ್ನು ಕಂಡುಹಿಡಿ ಯುವ ಗುಣವನ್ನೂ ರಕ್ತಗತ ಮಾಡಿಕೊಂಡಿದ್ದರು. ಇವರ ರಾಜಕೀಯ ವಿಚಾರಸರಣಿಯ ಮೇಲೆ ಲೋಕಮಾನ್ಯ ತಿಲಕರು, ಮಹಾತ್ಮಾ ಗಾಂಧಿಯವರು, ಬಹಳ ವರ್ಚಸ್ಸನ್ನು ಬೀರಿದರು. ಮಂಜಪ್ಪನವರ 'ಧನುರ್ಧಾರಿ' ಪತ್ರಿಕೆಯು ತಿಲಕರ ಪತ್ರಿಕೆಯ ಅಭಿಪ್ರಾಯವನ್ನು ಪ್ರಸಾರ ಮಾಡುತ್ತಿದ್ದಿತು. ಮೊದಲು ತಿಲಕರು ಮಂಜಪ್ಪನವರಿಗೆ ಸ್ಫೂರ್ತಿಯನ್ನಿತ್ತರು. ಆಮೇಲೆ ಮಹಾತ್ಮಾ ಗಾಂಧಿಯವರ ಜೀವನ ಮತ್ತು ರಾಜಕೀಯ ಚಟುವಟಿಕೆಗಳು ಮಂಜಪ್ಪನವರ ಮೇಲೆ ಇನ್ನೂ ಹೆಚ್ಚಿನ ಪರಿಣಾಮವನ್ನುಂಟುಮಾಡಿದವು. ಗಾಂಧೀಜಿಯವರ ಸತ್ಯಾಗ್ರಹ, ಖಾದಿ, ಸತ್ಯ, ಅಹಿಂಸೆ ಮೊದಲಾದ ತತ್ವಗಳನ್ನು ಮಂಜಪ್ಪನವರು ಅಂಗೀಕರಿಸಿ ಆ ಪ್ರಕಾರ ನಡೆದರು. ಇಷ್ಟೇ ಅಲ್ಲ. ಗಾಂಧೀಜಿ ಯವರ ಜೀವನಚರಿತ್ರೆಯನ್ನು ಬರೆದರು. ತಾವು ೧೯೨೧ರಿಂದಲೇ ಖಾದಿಭಕ್ತರಾಗಿ ಮುಂದೆ ಖಾದೀಶಾಸ್ತ್ರವೆಂಬ ಗ್ರಂಥವನ್ನೇ ಬರೆ-ದರು. ಆದಿಜನಸುಧಾರಣೆಯು ಮಂಜಪ್ಪನವರಿಗೆ ಬಹು ಮೆಚ್ಚಿನ ವಿಷಯವಾಗಿತ್ತು. ಸತ್ಯ, ಅಹಿಂಸೆ, ಖಾದಿ, ಅಸ್ಪೃಶ್ಯತಾನಿವಾರಣೆ ಗಾಗಿ ಶ್ರಮಿಸುತ್ತಿದ್ದ ಗಾಂಧೀಜಿಯವರು ಬುದ್ಧ, ಬಸವೇಶ್ವರರಂತೆ ಒಬ್ಬ ಮಹಾಪುರುಷರೆಂದು ಗಾಂಧೀಜಿಯವರ ಬಗ್ಗೆ ತಮ್ಮ ಅಪಾರವಾದ ಭಕ್ತಿಯನ್ನು ವ್ಯಕ್ತಪಡಿಸಿದರು.

ಮಂಜಪ್ಪನವರ ರಾಷ್ಟ್ರೀಯ ಸಾಹಿತ್ಯ ನಿರ್ಮಾಣಕ್ಕೆ

ರಾಷ್ಟ್ರೀಯ ಚಳವಳಿಯು ಪ್ರೇರಕಶಕ್ತಿಯಾದಂತೆ, ಮಹಾತ್ಮಾ ಗಾಂಧಿಯವರ ಜೀವನ ಮತ್ತು ಅವರ ದಿವ್ಯಬೋಧೆಗಳು ಕೂಡ ಮಂಜಪ್ಪನವರ ಬರಹಗಳಿಗೆ ಸ್ಫೂರ್ತಿಯನ್ನಿತ್ತವು. ಆದರೂ ಮಂಜಪ್ಪನವರು ಎಂದೂ ಮೂಢಭಕ್ತಿ ಅಥವಾ ಅಂಧಾನುಕರಣೆಗಳನ್ನು ನಂಬಿದವರಲ್ಲ. ಅಂತೆಯೇ ಅವರು ಗಾಂಧೀಜಿಯವರನ್ನೂ ಅವರ ರಾಜಕೀಯ ರೀತಿಗಳನ್ನೂ ಸಂದರ್ಭ ಬಂದಾಗ ಟೀಕಿಸಲು ಅಂಜುತ್ತಿರಲಿಲ್ಲ. ಅವರು ಜೀವನದ ಕೊನೆಯ ದಿನಗಳಲ್ಲಿ ಹಿಂದೂ ಮಹಾಸಭೆಯ ಕಡೆ ಒಲವನ್ನು ತೋರಿದರೂ ಹಿಂದೂ ಮಹಾಸಭೆಯನ್ನು ಅನೇಕ ಸಲ ಟೀಕಿಸದಿರಲಿಲ್ಲ. ಹೀಗೆ ವಿಚಾರ ಸ್ವಾತಂತ್ರ್ಯವನ್ನುಳಿಸಿಕೊಂಡು ತಮಗೆ ಯೋಗ್ಯ ಕಂಡ ಎಲ್ಲಾ ರಾಷ್ಟ್ರೀಯ ಚಟುವಟಿಕೆಗಳಿಗೂ ಉತ್ತೇಜನ ಕೊಡತಕ್ಕ ನಿಸ್ಪೃಹತೆ ಅವರದಾಗಿತ್ತು.

ಮಂಜಪ್ಪನವರು ಭಾರತೀಯ ಸಂಸ್ಕೃತಿಯ ಪರಮಭಕ್ತ-ರಾಗಿದ್ದರೂ ಪಾಶ್ಚಾತ್ಯರಿಂದ ಬಂದ ಒಳ್ಳೆಯ ವಿಚಾರಗಳನ್ನು ತಿರಸ್ಕರಿಸುವಂತಹ ದುರಭಿಮಾನ ಅವರಲ್ಲಿರಲಿಲ್ಲ. ಮಂಜಪ್ಪ-ನವರಿಗೆ ಕಥೆ, ಕಾದಂಬರಿ ಮತ್ತು ಕವನಗಳಿಗಿಂತಲೂ, ಧರ್ಮಶಾಸ್ತ್ರ ಮತ್ತು ಸಾಮಾಜಿಕಶಾಸ್ತ್ರಗಳಲ್ಲಿ ಹೆಚ್ಚು ಆಸಕ್ತಿ ಇದ್ದಿತು. ಕೊನೆ-ಕೊನೆಗೆ ಸಮಾಜಶಾಸ್ತ್ರದೊಡನೆ ವಿಜ್ಞಾನದ ಕಡೆಗೂ ಅವರು ಆಸಕ್ತಿಯುಳ್ಳವರಾಗಿದ್ದರು. ಅವರು ಕೈಕೊಂಡ 'ಪ್ರಗತಿ ಗ್ರಂಥ-ಮಾಲೆ'ಯೇ ಇದಕ್ಕೆ ಸಾಕ್ಷಿ. ಕನ್ನಡದಲ್ಲಿ ವಿಚಾರಪೂರಿತವಾದ ಗ್ರಂಥಗಳು ಹೆಚ್ಚುಹೆಚ್ಚಾಗಿ ಪ್ರಕಟವಾಗಬೇಕೆಂಬುದು ಅವರ ಬಯಕೆಯಾಗಿದ್ದಿತು. ಅವರು 'ಭಾರತೀಯರ ದೇಶಭಕ್ತಿ'

ಮುಂತಾದ ಶಾಸ್ತ್ರೀಯ ಗ್ರಂಥಗಳನ್ನು ಬರೆಯಲು ಇಂತಹ ಪ್ರಗತಿ ಶೀಲ ದೃಷ್ಟಿಯಿಂದಲೇ ಕಾರಣವಾಯಿತು. ಡಾರ್ವಿನ್ ಮತ್ತು ಹರ್ಬರ್ಟ್ ಸ್ಪೆನ್ಸರ್ ಮೊದಲಾದ ಪಾಶ್ಚಾತ್ಯ ಲೇಖಕರ ಗ್ರಂಥ-ಗಳು ಇವರ ವಿಚಾರಸರಣಿಯನ್ನು ರೂಪಿಸಿದವು. "ತನಗಾಗಿ ಕಾರ್ಯಗಳಿವೆಯೇ ವಿನಾ ಕಾರ್ಯಗಳಿಗಾಗಿ ತಾನಿಲ್ಲ" ಎಂಬ ಹರ್ಬರ್ಟ ಸ್ಪೆನ್ಸರರ ಮಾತು ಇವರಿಗೆ ಬಹು ಪ್ರಿಯವಾಗಿತ್ತು. ಸಮಾಜವನ್ನು ಅಭ್ಯಾಸಮಾಡುವ, ಸಮಸ್ಯೆಗಳನ್ನು ತುಲನಾತ್ಮಕ ವಾಗಿ ವಿಮರ್ಶಿಸಿ ನೋಡುವ ಕಲೆ ಮಂಜಪ್ಪನವರಿಗೆ ಕರಗತವಾಗಿ-ದ್ದಿತು. ಇವರು ಕನ್ನಡದ ಹರ್ಬರ್ಟ್ ಸ್ಪೆನ್ಸರ್ ಎನ್ನಲು ಅಡ್ಡಿ-ಯಿಲ್ಲ. ಮಂಜಪ್ಪನವರ ಜೀವನವು ಅನೇಕ ಸಾಮಾಜಿಕ, ರಾಜಕೀಯ ಪ್ರಭಾವಗಳಿಂದ ರೂಪುಗೊಂಡಿತು ಎಂಬುದನ್ನು ಒಪ್ಪಿಕೊಳ್ಳುವಾದರೂ ಅವರ ವ್ಯಕ್ತಿತ್ವ ವೈಶಿಷ್ಟ್ಯಪೂರ್ಣವಾಗಿದ್ದಿತು. ಮಂಜಪ್ಪನವರು ಸರ್ವಜ್ಞ, ಗಾಂಧೀಜಿ, ಸ್ಪೆನ್ಸರ್ ಮುಂತಾದವರ ಪ್ರಭಾವಕ್ಕೆ ಒಳಗಾಗಿದ್ದರೂ ಒಟ್ಟಿನಲ್ಲಿ ಅವರ ವ್ಯಕ್ತಿವೈಶಿಷ್ಟ್ಯವು ಕುಂದದೆ, ಮಂಜಪ್ಪನವರು ಮಂಜಪ್ಪನವರಾಗಿಯೇ ಉಳಿದರು. ಕೆಲವೊಂದು ಸಾಮಾಜಿಕ ಪರಿಸ್ಥಿತಿಗಳ ಮೂಲಕ ಅವರು ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಲು ಸಾಧ್ಯವಾಗಲಿಲ್ಲ. ಇದಕ್ಕೆ ಅವರ ಲ್ಲಿದ್ದ ಕೊರತೆಗಿಂತಲೂ ಸುತ್ತುಮುತ್ತಲಿನ ಪರಿಸರವೇ ಮುಖ್ಯ ಕಾರಣವೆನ್ನಬಹುದು. ವ್ಯಕ್ತಿಯು ಪರಿಸ್ಥಿತಿಯ ಕೂಸಷ್ಟೇ? ಪರಿಸ್ಥಿತಿಯನ್ನು ಮಾರ್ಪಡಿಸಿ ಮೇಲಕ್ಕೆ ಹೋಗುವವರ ಉದಾ-ಹರಣೆಗಳು ತೀರ ಅತ್ಯಲ್ಪ. ಮಂಜಪ್ಪನವರು ಕರ್ನಾಟಕವಲ್ಲಿ ಜನಿಸದೆ ಬೇರೆ ಪ್ರಾಂತಗಳಲ್ಲಿ ಜನಿಸಿ ಕನ್ನಡನಾಡಿನಲ್ಲಿ ಮಾಡಿದ

ಸೇವೆಯ ನಾಲ್ಕರಲ್ಲಿ ಒಂದು ಭಾಗ ಸೇವೆಯನ್ನು ಮಾಡಿದ್ದರೆ ಅವರು ಅಖಿಲ ಭಾರತ ವ್ಯಕ್ತಿಯಾಗಿ ಬೆಳಗುತ್ತಿದ್ದರು. ಈ ಸಂದರ್ಭದಲ್ಲಿ ಪ್ರಸಿದ್ಧ ಲೇಖಕರಾದ ಶ್ರೀ ಶಂ. ಬಾ. ಜೋಶಿ ಅವರು ವ್ಯಕ್ತಪಡಿಸಿರುವ ಮಾತುಗಳು ಮಾರ್ಮಿಕವಾಗಿವೆ : "ಸುತ್ತಲಿನ ಪರಿಸ್ಥಿತಿಯು ತೀರ ವಿಪರೀತವಾಗಿದ್ದರೆ ನೇತಾರನು ಎಷ್ಟೇ ಹಿರಿಯ ಯೋಗ್ಯತೆಯುವನಿದ್ದರೂ ಅವನಿಂದ ನಾಡಿಗೆ ಆಗ ಬೇಕಾದಷ್ಟು ಸಂಪೂರ್ಣ ಲಾಭವು ಆಗುವುದಿಲ್ಲ. ಕೆಲವೊಂದು ಸಾರೆಯಂತೂ ಮಾಡಬೇಕೆಂದ ಕೆಲಸದ ದಿಕ್ಕು ಬದಲಾಗುವ ಹೊತ್ತು ಕೆಲವರ ಪಾಲಿಗೆ ಬರುವುದು. ಕಂನಾಡಿನಲ್ಲಿ ಶ್ರೀ ಪಂಡಿತ ತಾರಾನಾಥಜಿ ಮತ್ತು ಶ್ರೀ ಮಂಜಪ್ಪನವರ ಜೀವನಕಾರ್ಯದ ವಿಷಯದಲ್ಲಿ ನನಗೆ ಆಗಾಗ ಹೀಗೆಯೇ ಎನಿಸುವುದು. ಇವರಿಬ್ಬರೂ ನಮ್ಮ ನಾಡಿನ ಅದ್ವಿತೀಯ ಮಹಾಪುರುಷರು. ಅಖಿಲ ಭಾರತೀಯ ಮಹಾಪುರುಷರಾಗುವುದಕ್ಕೆ ಯೋಗ್ಯರಾದ ಇವರ ಲಾಭವನ್ನು ನಮ್ಮ ಸಮಾಜವು ಸರಿಯಾಗಿ ಮಾಡಿಕೊಳ್ಳದೆ ಇದ್ದುದು ಅದರ ದುರ್ದೈವ."

ತಮ್ಮ ಮತ್ತು ತಮ್ಮ ಸುತ್ತುಮುತ್ತಲಿನ ಪರಿಸರದ ಕೊರತೆಯಿಂದಾಗಿ ಮಂಜಪ್ಪನವರು ಮಾಡಬಹುದಾದಷ್ಟು ಕಾರ್ಯವನ್ನು ಮಾಡಲಾಗಲಿಲ್ಲ. ಆದರೂ ಅವರ ಸಾಹಸ, ಪ್ರಾಮಾಣಿಕತೆ ಮತ್ತು ಧ್ಯೇಯನಿಷ್ಠೆಗಳಲ್ಲಿ ಸ್ವಲ್ಪವೂ ಚ್ಯುತಿ-ಯುಂಟಾಗಲಿಲ್ಲ. ಅವರೇ ಆತ್ಮಚರಿತ್ರೆಯಲ್ಲಿ ಹೇಳಿಕೊಂಡಿರು-ವಂತೆ "ಒಂದು ಬಡಕುಟುಂಬದಲ್ಲಿ ಹುಟ್ಟಿದ ವ್ಯಕ್ತಿಯು ಹಣದ ಬಲವಿಲ್ಲದೆ ವಿದ್ಯೆಯನ್ನೂ ಹೆಚ್ಚು ಸಂಪಾದಿಸದೆ ಮಹಾಸಾಹಸಿ,

ಯಾಗಿರದಿದ್ದರೂ ಸಾರ್ವಜನಿಕ ಕಾರ್ಯವೇ ತನ್ನ ಧ್ಯೇಯವೆಂದು ತಿಳಿದು ಪ್ರಾಮಾಣಿಕತನದಿಂದ ಪ್ರಯತ್ನಿಸುತ್ತಾ ಇದ್ದರೆ ಜನ-ಸೇವೆಯು ಸ್ವಲ್ಪಾದರೂ ಆಗುವುದರಲ್ಲಿ ಅಭ್ಯಂತರವಿಲ್ಲ" ಎಂಬ ಅವರ ಮಾತಿನ ಸತ್ಯಾಂಶವನ್ನು ಅರಿಯಬೇಕಾದರೆ ಅವರ ಜೀವನವೇ ಉಜ್ವಲ ದೃಷ್ಟಾಂತ.

**ಜೀವನ ಶಿಕ್ಷಣದ ಪ್ರಯೋಗ :** ಮಹಾತ್ಮಾ ಗಾಂಧಿ-ಯವರ ವಿಧಾಯಕ ಕಾರ್ಯಕ್ರಮದಲ್ಲಿ ಮೂಲ ಶಿಕ್ಷಣ ಅಥವಾ ಜೀವನ ಶಿಕ್ಷಣವು ಜನಾಂಗ ನಿರ್ಮಾಣ ಕಾರ್ಯದಲ್ಲಿ ನೆರವಾಗ ಬೇಕೆಂದು ತಿಳಿದಿದ್ದರು ಅಂತೆಯೇ ರಾಷ್ಟ್ರಪ್ರೇಮ, ಸ್ವಾವಲಂಬನ ಮುಂತಾದವುಗಳನ್ನು ಶಿಕ್ಷಣಪದ್ಧತಿಯಲ್ಲಿ ಅಳವಡಿಸಿಕೊಳ್ಳ ಬೇಕೆಂದು ಹೇಳುತ್ತಿದ್ದರು. ನಿಜವಾದ ಶಿಕ್ಷಣವು ಬುದ್ಧಿಬೆಳವಣಿಗೆ ಯನ್ನುಂಟುಮಾಡುವುದಲ್ಲದೆ ವಿದ್ಯಾರ್ಥಿಗಳಲ್ಲಿ ಕಾರ್ಯಪ್ರವೃತ್ತಿ, ಸ್ವಾವಲಂಬನೆ. ಸ್ವಾರ್ಥತ್ಯಾಗ, ಸಹಕಾರ, ದೈಹಿಕ ಪರಿಶ್ರಮ ಮುಂತಾದ ವಿಷಯಗಳಲ್ಲಿ ತರಬೇತಿ ಕೊಡುವಂತಹುದಾಗಿರ-ಬೇಕೆಂದು ಮಹಾತ್ಮಾಗಾಂಧಿಯವರು ಪ್ರತಿಪಾದಿಸಿದರು. ಇದಕ್ಕೂ ಮುಂಚಿತವಾಗಿ ಸ್ವಾಮಿ ದಯಾನಂದಸರಸ್ವತಿ ಮುಂತಾದವರು ಪಾಶ್ಚಾತ್ಯ ಶಿಕ್ಷಣಪದ್ಧತಿಯನ್ನು ಖಂಡಿಸಿ ಗುರುಕುಲ ಶಿಕ್ಷಣದ ಉದಾತ್ತ ಧ್ಯೇಯವನ್ನು ಜನತೆಯ ಮುಂದೆ ಇರಿಸಿದರು. ಇತರ ದೇಶನಾಯಕರು ರಾಷ್ಟ್ರೀಯ ಶಿಕ್ಷಣದ ಮಹತ್ವವನ್ನು ಒತ್ತಿ ಹೇಳಿದರು. ಗಾಂಧೀಜಿಯವರು ಜೀವನಶಿಕ್ಷಣವನ್ನು ಪ್ರಚಾರ ಮಾಡಿದುದಲ್ಲದೆ ವಾರ್ಧಾದಲ್ಲಿ ಅದರ ಪ್ರಯೋಗವನ್ನು ಕೂಡ ಮಾಡಿದರು. ವ್ಯಕ್ತಿಯು ಶಿಕ್ಷಣದ ಕೇಂದ್ರಬಿಂದುವಾಗಬೇಕೆಂಬುದು

ಮಹಾತ್ಮರ ತತ್ತ್ವವಾಗಿದ್ದಿತು. ಚರಕದ ಮೂಲಕ ನೂಲುವುದು, ನೇಯುವುದು, ಬಡಗಿತನ ಮುಂತಾದ ವೃತ್ತಿಶಿಕ್ಷಣವನ್ನು ಕೊಟ್ಟು ಜನತೆಯಲ್ಲಿ ಸ್ವಾವಲಂಬನೆಯನ್ನು ಬೆಳೆಸುವುದು ಅವರ ಉದ್ದೇಶ-ವಾಗಿದ್ದಿತು.

ಮಂಜಪ್ಪನವರು ಆಲಮಟ್ಟಿಯಲ್ಲಿ ಸ್ಥಾಪಿಸಿದ ವಿದ್ಯಾಲ-ಯವು ಮಹಾತ್ಮಾ ಗಾಂಧಿಯರ ಸಲಹೆಗೆ ಅನುಗುಣವಾಗಿದ್ದರೂ, ಗಾಂಧೀಜಿಯವರು ಮುಂದೆ ವಾರ್ಧಾದಲ್ಲಿ ರೂಪಿಸಿದ ವೃತ್ತಿ-ಶಿಕ್ಷಣಕ್ಕೆ ನಾಂದಿಯಾಗಿದ್ದಿತು. ಇದು ಕಾಯಕ ಶಿಕ್ಷಣದ ಮತ್ತು ನೈತಿಕ ಶಿಕ್ಷಣದ ಒಂದು ಗುರುಕುಲವಾಗಿದ್ದಿತು. ಮಂಜಪ್ಪನವರು ಪ್ರಾಚೀನ ಭಾರತೀಯರ ಗುರುಕುಲಪದ್ಧತಿಯನ್ನೇ ಮೇಲ್ಪಂಕ್ತಿ-ಯನ್ನಾಗಿಟ್ಟುಕೊಂಡು, ಆಧುನಿಕ ಶಿಕ್ಷಣದ ಉತ್ತಮ ಅಂಶಗಳ-ನ್ನನುಸರಿಸಿ ಈ ನೂತನ ವಿದ್ಯಾಲಯದ ಪ್ರಯೋಗವನ್ನು ಮಾಡಿ ದರು. ಕೃಷ್ಣಾನದಿಯ ದಂಡೆಯಲ್ಲಿ ಪಟ್ಟಣಗಳ ಆಕರ್ಷಣೆಯಿಂದ ದೂರದಲ್ಲಿ ನಿಸರ್ಗದ ನಡುವೆ ಸ್ಥಾಪಿತವಾದ ಈ ವಿದ್ಯಾಲಯದಲ್ಲಿ ಅನೇಕ ಬಾಲಕರು ಶಿಕ್ಷಣಪಡೆದರು. ಅನೇಕರು ಈ ವಿದ್ಯಾಲಯ ಕ್ಕಾಗಿ ಸಹಾಯ ಮತ್ತು ಸೇವೆಗಳನ್ನು ಸಲ್ಲಿಸಿದರು. ಇವರೆಲ್ಲರ ಪ್ರಯತ್ನಗಳು ಸ್ತುತ್ಯವಾಗಿದ್ದರೂ ಮಂಜಪ್ಪನವರ ನೂತನ ವಿದ್ಯಾಲಯದ ಪ್ರಯೋಗ ಅಷ್ಟು ಯಶಸ್ವಿಯಾಗಲಿಲ್ಲವೆಂದೇ ಹೇಳಬೇಕು. ಇದಕ್ಕೆ ಮಂಜಪ್ಪನವರಾಗಲೀ, ಅವರೊಡನೆ ದುಡಿದ ಶಿಕ್ಷಕವೃಂದವಾಗಲೀ ಹೊಣೆಗಾರರಲ್ಲ. ಒಂದು ಕಡೆ ಇಂತಹ ಶಿಕ್ಷಣದ ಉಪಯುಕ್ತತೆಯನ್ನು ಅರಿಯಲಾರದ ಜನತೆ, ಇನ್ನೊಂದು ಕಡೆ ವಿದ್ಯಾಲಯದ ಶಿಸ್ತಿನ ಕಟ್ಟುನಿಟ್ಟುಗಳಿಗೆ

ಒಳಗಾಗದ ವಿದ್ಯಾರ್ಥಿಗಳೇ ಕಾರಣರು. ಅಲ್ಲದೆ ಈ ವಿದ್ಯಾಲಯದ ಯೋಜನೆಯು ಸರಿಯಾದ ಪ್ರಚಾರವನ್ನು ಪಡೆಯಲಿಲ್ಲ. ಇಲ್ಲಿಗೆ ಬರುವ ವಿದ್ಯಾರ್ಥಿಗಳು ಪ್ರತಿ ವರುಷ ೨೦೦ ರೂಪಾಯಿಯ ಶುಲ್ಕವನ್ನು ಕೊಡಬೇಕೆಂಬ ನಿಯಮವಿದ್ದುದರಿಂದ ಶ್ರೀಮಂತ ಬಾಲಕರೇ ಸೇರುವಂತಾಗಿ. ಕಲಿಯಬೇಕೆಂಬ ಉತ್ಕಟೇಚ್ಛೆಯುಳ್ಳ ಬಡವಿದ್ಯಾರ್ಥಿಗಳಿಗೆ ಪ್ರವೇಶ ಪಡೆಯಲು ಅವಕಾಶವಿರಲಿಲ್ಲ. ಸರ್ಕಾರಿ ನೌಕರಿ ವ್ಯಾಮೋಹವೇ ಹೆಚ್ಚಾಗಿದ್ದ ಅಂದು ಉದ್ಯೋಗ ಶಿಕ್ಷಣವು ಆಕರ್ಷಕವಾಗಲಿಲ್ಲ.

**ಉಚ್ಚತರಗತಿಯ ಉಪನ್ಯಾಸಕ-ಲೋಕಶಿಕ್ಷಕ :** ಬರಹದಲ್ಲಿ ಪಳಗಿದ್ದ ಮಂಜಪ್ಪನವರು ಭಾಷಣ ಮಾಡುವುದಕ್ಕೂ ಹೆಸರಾಗಿದ್ದರು. ಅವರ ಸಂಪಾದಕೀಯ ಬರಹಗಳು ಖಿಡ್ಗ-ಕ್ಕಿಂತಲೂ ಹರಿತವಾಗಿದ್ದರೆ ಅವರ ಮಾತುಗಳು ಜ್ಞಾನದ ಕಿಡಿ-ಗಳಾಗಿದ್ದವು. ಕನ್ನಡನಾಡಿನ ಮೂಲೆಮೂಲೆಗೆ ಹೋಗಿ ಅವರು ವ್ಯಾಖ್ಯಾನ ಕೊಡುತ್ತಿದ್ದರು. ವಿಜಾಪುರ ಜಿಲ್ಲೆಯಲ್ಲಿ ಪ್ರತಿ ಹಳ್ಳಿಗೂ ಹೋಗಿ ಭಾಷಣಮಾಡಿ ಜನಜಾಗೃತಿ ಮಾಡಿದರು. ಜನ ಅವರನ್ನು 'ಭಾಷಣದ ಮಾಮಲೇದಾರ'ನೆಂದು ಕರೆದರು. ಬಸವಜಯಂತಿ, ನಾಡಹಬ್ಬ, ಗಣೇಶೋತ್ಸವ ಮೊದಲಾದ ಸಂದರ್ಭಗಳಲ್ಲಿ ನಾಡಿನ ಎಲ್ಲಾ ಕಡೆಗಳಿಂದಲೂ ಇವರಿಗೆ ಆಮಂತ್ರಣ ಬರುತ್ತಿತ್ತು. ಇವರಿಲ್ಲದ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಭೆಸಮ್ಮೇಳನಗಳೇ ವಿರಳ. ಇವರ ಭಾಷಣಗಳನ್ನು ಕೇಳುವುದೆಂದರೆ ಜನರಿಗೊಂದು ಹುರುಪು. "ಅವರು ಭಾಷಣಕ್ಕೆ ನಿಂತರೆ ಆ ಮಿಂಚುದೀವಿಗೆಯ ಬೆಳಕು ಅವರ ನುಣ್ಣಗಿನ ತಲೆಯಲ್ಲಿ

ಮಿಂಚುತ್ತಿತ್ತು. ಅವರ ನಗೆಮುಖದಿಂದ ಪ್ರೇಮವು ಅಮೃತಧಾರೆಯಾಗಿ ಪ್ರವಹಿಸುತ್ತಿತ್ತು" ಎಂದು ಸಿಂಪಿ ಲಿಂಗಣ್ಣನವರು ವರ್ಣಿಸಿದ್ದಾರೆ. ಅವರ ಭಾಷಣಗಳನ್ನು ಕೇಳಿದ ಲಕ್ಷಾಂತರ ಜನ ಅವರನ್ನು 'ಮಿಂಚಪ್ಪ'ನೆಂದೇ ಭಾವಿಸಿದರು. ಶಿಕ್ಷಕವೃತ್ತಿಯನ್ನು ಕೈಕೊಂಡಾಗ ಶಾಲೆಯ ವಿದ್ಯಾರ್ಥಿಗಳಿಗೆ ಮಾತ್ರ ಅವರ ವ್ಯಾಖ್ಯಾನದ ಲಾಭವಾದರೆ ಅವರು ಕನ್ನಡನಾಡಿನಲ್ಲೆಲ್ಲಾ ಪರಿವ್ರಾಜಕರಂತೆ ಸುತ್ತಿ ಭಾಷಣಮಾಡಿದಾಗ ಲೋಕಶಿಕ್ಷಣಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದರು. ಅರಳು ಹುರಿದಂತೆ ಅವರ ಮಾತಿನ ಸರಣಿ. ಅವರು ಭಾಷಣಮಾಡುತ್ತಿದ್ದರೆ ಚಪ್ಪಾಳೆಯ ಮೇಲೆ ಚಪ್ಪಾಳೆ. ಹೊಂದಿಕೆಯಾದ ಮಾತು, ಶ್ರೇಷ್ಠವಾದ ವಿಚಾರಗಳು, ತಿಳಿಯಾದ ಹಾಸ್ಯಗಳಿಂದ ಕೂಡಿದ ಅವರ ಭಾಷಣಗಳಿಂದ ಸ್ಫೂರ್ತಿ ಪಡೆಯದವರೇ ಅಪರೂಪ. ಅವರ ಮಾತಿನಲ್ಲಿ ಜನರನ್ನು ಹುರಿದುಂಬಿಸುವಂತಹ ಶಕ್ತಿಯಿತ್ತು. ೧೯೨೩ರಲ್ಲಿ ಹಾವೇರಿಯಲ್ಲಿ ಕೂಡಿದ್ದ ರಾಜಕೀಯ ಪರಿಷತ್ತಿನ ಇವರ ಅಧ್ಯಕ್ಷಭಾಷಣವನ್ನು ಕೇಳಿ ಅಭಿನಂದನೆ ಸಲ್ಲಿಸಿದ ದಿವಂಗತ ಮುದವೀಡು ಕೃಷ್ಣರಾಯರು ಇವರು ಕನ್ನಡ ಜನಾಂಗಕ್ಕೆ ಮಾತ್ರವಲ್ಲ ಇಡೀ ಭಾರತದ ಭಾಗ್ಯವಿಧಾತರಾಗುವ ಸುಸಂದರ್ಭವು ಕಾಲಗರ್ಭದಲ್ಲಿ ಅಡಗಿದೆ ಎಂದು ಒಡನುಡಿದರು. ಇವರ ಭಾಷಣಗಳು ಜನರಿಗೆ ಅಷ್ಟು ಹಿಡಿಸುತ್ತಿದ್ದವು. "ಅವರ ಭಾಷಣಗಳು ಯಾವಾಗಲೂ ಪ್ರೌಢವಾದವುಗಳೂ, ಉಚ್ಚ ವಿಚಾರಗಳುಳ್ಳವೂ ಆಗಿರುತ್ತಿದ್ದವು. ವಿಷಯಗಳನ್ನು ನಿರೂಪಿಸುವಲ್ಲಿ ಅವುಗಳ ಸತ್ಯತೆಯ ವಿಷಯವಾಗಿ ಅವರಲ್ಲಿದ್ದ ದೃಢವಿಶ್ವಾಸವು ಯಾವಾ-

ಗಲೂ ಹೊರಸೂಸುತ್ತಿತ್ತು. ಆದ್ದರಿಂದ ಅವರ ಭಾಷಣಗಳು ಶ್ರೋತೃಗಳ ಮೇಲೆ ಬಹಳ ಪರಿಣಾಮ ಮಾಡುತ್ತಿದ್ದುವು. ಅವರು ತಾಸು, ಎರಡು ತಾಸು ಉಪನ್ಯಾಸ ಮಾಡಿದರೂ ಯಾರಿಗೂ ಬೇಸರವಾಗುತ್ತಿದ್ದಿಲ್ಲ. ಅವು ಸ್ವಾರಸ್ಯಪೂರ್ಣವಾದವು-ಗಳೂ ಮತ್ತು ಮಾರ್ಮಿಕವಾದವುಗಳೂ, ಈಚೆಗೆ ಹಾಸ್ಯಕಾರಕವೂ ಇರುತ್ತಿದ್ದವು. ಅವರಿಗೆ ಕನ್ನಡಭಾಷೆಯ ಮೇಲಿದ್ದ ಪ್ರಭುತ್ವವು ಅವರ್ಣನೀಯವಾದದ್ದು. ಸರಳವಾದ ಕನ್ನಡ ಅವರದು." ಹೀಗೆಂದು ಜ್ಞಾನವೃದ್ಧರಾಗಿದ್ದ ದಿವಂಗತ ಪಿ. ಜಿ. ಹಳಕಟ್ಟಿ ಯವರು ಹೇಳಿದ್ದಾರೆ.

ಮಂಜಪ್ಪನವರ ಪುಸ್ತಕಗಳನ್ನೂ ಪತ್ರಿಕಾ ಬರಹಗಳನ್ನೂ ಓದಿ, ತಿಳಿವಿನ ಬೆಳಕನ್ನು ಕಂಡ ಜನ ಲಕ್ಷಾವಧಿಯಾದರೆ ಅವರ ನಿರರ್ಗಳವಾದ ವಿಚಾರಪೂರಿತವಾದ ಅಮೃತವಾಣಿಯನ್ನು ಕೇಳಿ ಆನಂದಿಸಿದ ಜನರ ಸಂಖ್ಯೆ ಅಗಣಿತ. ಇವರು ೧೯೩೬ರ ಹೊತ್ತಿಗೇ ೨೦೦ ಸ್ಥಳಗಳಲ್ಲಿ ಒಂದು ಸಾವಿರಕ್ಕಿಂತಲೂ ಹೆಚ್ಚು ಭಾಷಣ ಮಾಡಿದ್ದರು. ಇವರ ಆಯುಷ್ಯದಲ್ಲಿ ಇವರು ಮಾಡಿದ ಭಾಷಣ ಗಳನ್ನು ಪರಿಗಣಿಸಿದರೆ ಅದೆಷ್ಟು ಲಕ್ಷ ಜನ ಇವರ ಉಜ್ವಲವಾದ ಉಪನ್ಯಾಸಗಳಿಂದ ಲಾಭ ಹೊಂದಿರಬಹುದೆಂಬುದರ ಬಗೆಗೆ ಕಲ್ಪನೆ ಯಾದೀತು. ಅವರು ಮಾಡಿದ ಭಾಷಣಗಳನ್ನು ಸಂಗ್ರಹಿಸಿದ್ದರೆ ಅದೇ ಒಂದು ದೊಡ್ಡ ಗ್ರಂಥವಾಗುತ್ತಿತ್ತು. ರಾಯಚೂರಿನಲ್ಲಿ ೧೯೨೬ ರಲ್ಲಿ ಮಂಜಪ್ಪನವರು ಮಾಡಿದ ಉಪನ್ಯಾಸಗಳನ್ನು ಅಲ್ಲಿನ ವಕೀಲರಾಗಿದ್ದ ಶ್ರೀ ರಾಮಕಿಶನರು ಉರ್ದುಭಾಷೆಯಲ್ಲಿ ಬರೆದು ಸಂಗ್ರಹಿಸಿದ್ದ ಪುಸ್ತಕವು ನಮಗೆ ದೊರಕಿದೆ. ಅಹಿಂಸೆ

ಮೊದಲಾದ ಪ್ರಗಲ್ಭ ವಿಚಾರಗಳನ್ನು ಕುರಿತು ಕನ್ನಡದಲ್ಲಿ ಮೂರುದಿನ ಉಪನ್ಯಾಸ ಮಾಡಿದ್ದ ಮಂಜಪ್ಪನವರ ಮಾತುಗಳನ್ನು ಉರ್ದುಭಾಷೆಯಲ್ಲಿ ಬರೆದಿಟ್ಟ ಪುಟಗಳ ಸಂಖ್ಯೆ ಮೂವತ್ತಕ್ಕೂ ಮೀರುತ್ತದೆ ಎಂದರೆ ಮಂಜಪ್ಪನವರ ಉಪ-ನ್ಯಾಸದ ಬಗ್ಗೆ ಸರಿಯಾದ ಕಲ್ಪನೆಯಾಗುವುದರಲ್ಲಿ ಸಂದೇಹವಿಲ್ಲ. ಮಂಜಪ್ಪನವರು ಆಜನ್ಮ ಶಿಕ್ಷಕರೇ ಆಗಿದ್ದರು.



# ೪. ಉಪಸಂಹಾರ

ಒಟ್ಟಿನಲ್ಲಿ ಮಂಜಪ್ಪನವರು ಶ್ರೇಷ್ಠ ಜ್ಞಾನಯೋಗಿಗಳೂ ಕರ್ಮಯೋಗಿಗಳೂ ಆಗಿದ್ದರು. ಅವರ ಜೀವನವು ಕೇವಲ ಭಾಷಾಂತರವಾಗಿರದೆ ಅವರದೇ ಆದ ಸ್ವಯಂಸಾಧನೆಯ ಉಜ್ವಲ ಕೃತಿಯಾಗಿತ್ತು. ಕವಿಗಳೂ, ದಾರ್ಶನಿಕರೂ ಮೆಟ್ಟಿ ಪಾವನವಾದ ಬನವಾಸಿಯಲ್ಲಿ ಮಂಜಪ್ಪನವರು ಜನ್ಮವೆತ್ತಿದರು. ಈ ಪವಿತ್ರ-ವಾದ ಕ್ಷೇತ್ರದಲ್ಲಿಯೇ ಜೀವಿಸಿ ಪ್ರಖ್ಯಾತರಾಗಿರುವ ಕನ್ನಡದ ಆದಿಕವಿ, ವಿಶ್ವಕವಿ ಪಂಪ, ಭಾರತದ ಶ್ರೇಷ್ಠ ತತ್ವಜ್ಞಾನಿಗಳ ಮಾಲಿಕೆಯಲ್ಲಿ ಬರುವ ಅಲ್ಲಮಪ್ರಭು, ಕನ್ನಡ ಸಾಹಿತ್ಯದ ಕೋಕಿಲೆ ಅಕ್ಕಮಹಾದೇವಿ, ಪ್ರತಿಭಾಶಾಲಿ ಕವಿ ಚಾಮರಸರಂತೆ ಬನವಾಸಿ ನಾಡಿನಲ್ಲಿ ಬಾಳಿದ ಮಂಜಪ್ಪನವರು ಕನ್ನಡ ನಾಡನ್ನು ಬೆಳಗಿದರು, ಜ್ಞಾನಕೋಕಿಲೆಯಾಗಿ ಹಾಡಿದರು. ಅರಿವಿನ ದುಂಬಿ-ಯಾಗಿ ಕನ್ನಡ ಕವಿಗಳನ್ನು ಹೊಕ್ಕರು. ಕನ್ನಡ ಸಂಸ್ಕೃತಿಯ ಕಂಪನ್ನು ಬೀರಿದರು. ಭಾರತ ಐಕ್ಯತೆಯ ಸಂದೇಶವನ್ನು ಸಾರಿ-ದರು. ಮಂಜಪ್ಪನವರ ಜೀವನ ಹಾಗೂ ಅವರ ಬರಹಗಳಲ್ಲಿ ಪಾಂಡಿತ್ಯ ಮತ್ತು ಕ್ಷಾತ್ರತೇಜಗಳ ಬೆಸುಗೆಯನ್ನು ಗುರುತಿಸ-ಬಹುದು ಕೇವಲ ವೇದಶಾಸ್ತ್ರಾಗಮಪುರಾಣಗಳನ್ನೋದುವ ಜನರಿಂದ ಮಾತ್ರ ಕೂಡಿರದೆ ಯುದ್ಧರಂಗದಲ್ಲಿ ಕಾದಿ ಗೆದ್ದ ಬಲ-ಶಾಲಿಗಳನ್ನು ಸ್ತುತಿಸುವ ಧ್ವನಿಯಿಂದ ಬನವಾಸಿಯ ನಾಡು

ಪಡೆಯುತ್ತಿತ್ತೆಂದು ಚಾಮರಸನು ಹೇಳಿದ್ದಾನೆ. ಮಂಜಪ್ಪ ಬನವಾಸಿಯು ಈ ಪರಂಪರೆಗಳ ಪ್ರತಿನಿಧಿ.

ಶ್ರೀ ಮಂಜಪ್ಪನವರನ್ನು ಸ್ವಾಮಿ ವಿವೇಕಾನಂದರೊಡನೆ ಹೋಲಿಸಬಹುದು. ಇಬ್ಬರೂ ಸನ್ಯಾಸಿಗಳು; ಭಾರತ ಸ್ವಾತಂತ್ರ್ಯದ ಪುರಸ್ಕರ್ತರು. ಇಬ್ಬರೂ ಕಾಂಗ್ರೆಸ್ ಮೊದಲಾದ ರಾಜಕೀಯ ಪಕ್ಷಗಳನ್ನು ಸೇರದೆ ಹೊರಗಿದ್ದೇ ರಾಷ್ಟ್ರೀಯ ಹೋರಾಟಕ್ಕೆ ಬೆಂಬಲವಿತ್ತರು. ಇಬ್ಬರೂ ಧಾರ್ಮಿಕ ಕೆಚ್ಚಿನಿಂದ ಕೂಡಿದ್ದು ಭಾರತದ ಪುನರುದ್ಧಾರಕ್ಕಾಗಿ ಶ್ರಮಿಸಿದರು. ಸ್ತ್ರೀಯರ ಮುನ್ನಡೆ, ಅಸ್ಪೃಶ್ಯರ ಏಳ್ಗೆ, ಬಡತನ ನಿವಾರಣೆ–ಹೀಗೆ ಸಮಾಜ ಸುಧಾರಣೆಗಾಗಿ ಹಾಗೂ ಜನಾಂಗದ ಉತ್ಕರ್ಷಕ್ಕಾಗಿ ದುಡಿದರು. ಇಬ್ಬರಿಗೂ ಹಿಂದು ಧರ್ಮದಲ್ಲಿ ಅಪಾರ ಪ್ರೇಮವಿತ್ತು, ಆದರೆ ಇತರ ಧರ್ಮಗಳ ಬಗ್ಗೆ ಗೌರವ ಮತ್ತು ಸಹನೆಗಳಿದ್ದವು. ವಿವೇಕಾನಂದರಿಗೆ ರಾಮಕೃಷ್ಣ ಪರಮಹಂಸರ ಆಶೀರ್ವಾದವಿದ್ದಂತೆ ಮಂಜಪ್ಪನವರಿಗೆ ಅಥಣಿ ಶಿವಯೋಗಿಗಳ ಅನುಗ್ರಹವಿತ್ತು. ಇಬ್ಬರೂ ಶ್ರೇಷ್ಠ ವಾಗ್ಮಿಗಳು. ಹೀಗೆ ಅನೇಕ ವಿಷಯಗಳಲ್ಲಿ ಹೋಲಿಕೆಗಳಿದ್ದರೂ ಕೆಲವು ಭಿನ್ನತೆಗಳಿದ್ದವು. ಹೆಚ್ಚಿನ ಶಿಕ್ಷಣ ಸೌಲಭ್ಯವಿಲ್ಲದ ಮಂಜಪ್ಪನವರ ಕಾರ್ಯಕ್ಷೇತ್ರ ಕನ್ನಡನಾಡಿಗೆ ಸೀಮಿತವಾಗಿತ್ತು. ಸ್ವಾಮಿ ವಿವೇಕಾನಂದರು ಉಚ್ಚ ಶಿಕ್ಷಣ ಪಡೆದ ಪದವೀಧರರು. ಅವರು ಪ್ರಪಂಚದ ಸಭೆಗಳಲ್ಲಿ ಭಾಗವಹಿಸಿ ಭಾರತೀಯ ಸಂಸ್ಕೃತಿ ಧರ್ಮಗಳನ್ನು ಪ್ರಸಾರ ಮಾಡಿದರು. ಮಂಜಪ್ಪನವರು ಕರ್ನಾಟಕದಲ್ಲಿದ್ದುಕೊಂಡೇ ಸ್ವಾಮಿ ವಿವೇಕಾನಂದರಂತೆ ಜನಜಾಗೃತಿಯ ಕಾರ್ಯವನ್ನು ಮಾಡಿದರು. ಅವರು

೪೦ ವರ್ಷಗಳ ಕಾಲ ಅವಿಶ್ರಾಂತವಾಗಿ ಜನಸೇವೆಯೇ ದೇಶಸೇವೆ-ಯೆಂದು ದುಡಿದು ಸಣ್ಣಾದರು. ಅವರ ದೊಡ್ಡ ಗುಣವೆಂದರೆ ತಮ್ಮ ಕೊರತೆಗಳನ್ನು ಮುಚ್ಚುಮರೆಯಿಲ್ಲದೆ ಒಪ್ಪಿಕೊಳ್ಳುತ್ತಿ-ದ್ದುದು. ಸನ್ಮಾನಗಳಿಗೆ ಬಾಯ್ತೆರೆಯದೇ ಏಕನಿಷ್ಠೆಯಿಂದ ನಾಡು ನುಡಿಗಳಿಗಾಗಿ ದುಡಿದ ಮಂಜಪ್ಪನಂತಹವರು ಇನ್ನೊಬ್ಬರು ಸಿಕ್ಕುವುದು ವಿರಳ.

ಲೇಖಕರಾಗಿ ಮಂಜಪ್ಪನವರ ಸ್ಥಾನ ಉನ್ನತವಾಗಿದೆ. ಕನ್ನಡ ಭಾಷೆಯ ಮೇಲಿನ ಅವರ ಹಿಡಿತ ಅಸದೃಶವಾದುದು. ಮಂಜಪ್ಪನವರ ಗದ್ಯಶೈಲಿ ಸರಳ ಮತ್ತು ಪರಿಣಾಮಕಾರಿಯಾ-ದುದು. ಅವರು ಸಂಶೋಧನೆ ಮಾಡಿ ಶಾಸ್ತ್ರೀಯ ಗ್ರಂಥಗಳನ್ನೂ ಬರೆದರು; ಮಕ್ಕಳಿಗಾಗಿ ಸಾಹಿತ್ಯವನ್ನೂ ಸೃಷ್ಟಿಸಿದರು. ಓದು-ಗರ ಭಾವನೆಗಳನ್ನು ಸಂಸ್ಕರಿಸಿ ಅವರನ್ನು ಮೇಲಕ್ಕೆತ್ತುವುದೇ ಸಾಹಿತ್ಯದ ಕೆಲಸವೆಂಬ ಮಾತನ್ನು ಒಪ್ಪುವುದಾದರೆ, ಮಂಜಪ್ಪ-ನವರು ಕನ್ನಡ ಸಾಹಿತ್ಯಕ್ಕೆ ನೀಡಿದ ಕಾಣಿಕೆಯು ಬಹು ಬೆಲೆಯು-ಳ್ಳದ್ದು ಎಂಬ ಮಾತನ್ನು ಯಾರಾದರೂ ಒಪ್ಪಬೇಕಾಗುತ್ತದೆ. ಅವರ ಬರಹಗಳು ಕನ್ನಡ ಗದ್ಯಶೈಲಿಯ ಉತ್ತಮ ನಿದರ್ಶನ-ಗಳಾಗಿವೆ. ಅವರ ಅನೇಕ ಗ್ರಂಥಗಳು ಅವರ ಸಂಶೋಧನಾ ಸಾಮರ್ಥ್ಯವನ್ನು ಪ್ರತಿಬಿಂಬಿಸುತ್ತವೆ. ಇಪ್ಪತ್ತನೆಯ ಶತಮಾನ-ದಲ್ಲಿ ಕನ್ನಡ ಗದ್ಯಶೈಲಿಯನ್ನು ರೂಪುಗೊಳಿಸಿದ ಹಿರಿಯ ಲೇಖ-ಕರಲ್ಲೊಬ್ಬರೂ, ಕನ್ನಡದಲ್ಲಿ ವಿಚಾರ ಹಾಗೂ ರಾಷ್ಟ್ರೀಯ ಸಾಹಿತ್ಯದ ಪಿತಾಮಹರೂ ಆದ ಇವರ ಸಾಹಿತ್ಯಸೇವೆ ಅಪ್ರತಿಮ-ವಾದದ್ದು.

ಪ್ರಚಂಡವಾದ ಖ್ಯಾತ ಸಾಹಿತಿ ಬರ್ನಾರ್ಡ್ ಷಾ ರವರು, ಲೇಖಕರಾಗಿ ನಿಮ್ಮನ್ನು ಹೇಗೆ ಓದುಗರ ಮುಂದಿಡಲಿ ಎಂದು ಕೇಳಿದವರಿಗೆ ನನ್ನ ಕೃತಿಗಳಿವೆ. ಅವುಗಳ ಮೇಲಿಂದ ಜಗತ್ತು ಬೆಲೆಗಟ್ಟಲಿ ಎಂದು ಉತ್ತರಿಸಿದರೆಂದು ಹೇಳಲಾಗಿದೆ. ಮಂಜಪ್ಪ-ನವರ ಕೃತಿಗಳಿಗೂ ಈ ಮಾತು ಅನ್ವಯಿಸುತ್ತದೆ. ಮಂಜಪ್ಪ-ನವರ ಬಹುಮುಖದ ವರ್ಣಮಯ ವ್ಯಕ್ತಿತ್ವವನ್ನು ಅವರ ಬರಹಗಳ ಮೂಲಕವೇ ಅರಿಯಬಹುದು. ಅವರು ಬರೆದ ಲೇಖನ ಮತ್ತು ಗ್ರಂಥಗಳೇ ಅವರ ವ್ಯಕ್ತಿತ್ವದ ಪರಿಚಯ ಮಾಡಿಕೊಡಬಲ್ಲವು. ಆದರೂ ಅವರ ಸಮಗ್ರ ಕೃತಿಗಳೂ ಹಾಗೂ ಪತ್ರಿಕಾ ಬರಹಗಳನ್ನು ಓದಿದ ಯಾರಾದರೂ ಅವರ ಲೇಖನ ಕಲೆಯನ್ನು ಕುರಿತು ನಾಲ್ಕು ಮಾತು ಹೇಳದಿರಲಾರರು. ಅವರ ಆತ್ಮಚರಿತ್ರೆಯು ಅವರ ಜೀವನಸಾಧನೆ ಹಾಗೂ ನ್ಯೂನತೆಗಳ ಮೇಲೆ ಬೆಳಕು ಬೀರುತ್ತದೆ. ವ್ಯಕ್ತಿಯ ನಿಃಸ್ಪೃಹತೆ, ನಿರ್ಭಯತೆ, ಸತ್ಯತೆ ಮೊದಲಾದ ಗುಣಗಳನ್ನು ಈ ಆತ್ಮಚರಿತ್ರೆಯು ಪ್ರಕಾಶ ಗೊಳಿಸುತ್ತದೆ. ಅವರ ಇತರ ಪುಸ್ತಕಗಳು ಈ ಆತ್ಮಚರಿತ್ರೆಯ ವಿಸ್ತರಣೆಗಳೆನ್ನಬಹುದು. ಅವರ ಜೀವನಸೂತ್ರ ಒಂದೇ. ಮಂಜಪ್ಪ ಮತ್ತು ಅವರ ಕೃತಿಗಳಲ್ಲಿ ಅದೇ ವ್ಯಕ್ತಿತ್ವದ ದರ್ಶನ. ಅವು ಬೇರೆಬೇರೆಯಾಗಿ ಕಂಡರೂ ಅವುಗಳಲ್ಲಿ ಏಕತೆಯಿದೆ.

ಒಬ್ಬ ಲೇಖಕನ ಪ್ರಭಾವವನ್ನು ಸೂಕ್ಷ್ಮವಾಗಿ ಅವ-ಲೋಕಿಸಿದರೆ ಅವನ ಕೃತಿಗಳ ಬೆಲೆ ಕಟ್ಟಬಹುದಾಗಿದೆ. ಮೆಕೆವೆಲ್ಲಿ, ರೂಸೋ, ಫ್ರಾಯಿಡ್, ಕಾರ್ಲ್‌ಮಾರ್ಕ್ಸ್, ಡಾರ್ವಿನ್ ಮುಂತಾದ ಪ್ರಖ್ಯಾತ ಬರಹಗಾರರು ಜಗತ್ತಿಗೆ ಹೊಸ ವಿಚಾರಕ್ರಾಂತಿ-

ಯನ್ನುಂಟುಮಾಡಿದ ಮಹಾಪುರುಷರು. ಅಂತಹ ಪ್ರತಿಭಾಶಾಲಿ ಬರಹಗಾರರು ಅಪರೂಪ. ಪ್ರಚಂಡ ಜನಾನುರಾಗವನ್ನು ಪಡೆದ ಗ್ರಂಥಕರ್ತರಿಗೇನೂ ಕೊರತೆಯಿಲ್ಲ. ಬರ್ಟ್‌ರೆಂಡ್ ರಸೆಲ್, ಬರ್ನಾರ್ಡ್ ಷಾ ಮೊದಲಾದವರನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಭಾರತದಲ್ಲಿ ಮಹಾತ್ಮಾಗಾಂಧಿ ಹಾಗೂ ಎಂ. ಎನ್. ರಾಯ್., ರವೀಂದ್ರನಾಥ ಠಾಕೂರ, ಪ್ರೇಮಚಂದ, ಮೈಥಿಲಿಶರಣ ಗುಪ್ತ, ಬಂಕಿಮಚಂದ್ರ ಚಟರ್ಜಿ, ಶರತ್‌ಚಂದ್ರ ಮೊದಲಾದವರ ಬರಹಗಳು ಬಹಳ ಜನಪ್ರಿಯವಾದವು. ಇದೇ ರೀತಿ ಮಂಜಪ್ಪ ನವರ ಬರಹಗಳು ಕನ್ನಡಿಗರ ಆದರಕ್ಕೆ ಪಾತ್ರವಾದವು. ಆದರೆ ಮಂಜಪ್ಪನವರಿಗೂ ಅರವಿಂದ ಘೋಷ್, ಸರೋಜಿನಿ ನಾಯ್ಡು ಮುಂತಾದವರಿಗೂ ಕೆಲವು ಭಿನ್ನತೆಗಳಿವೆ. ಮಂಜಪ್ಪನವರು ಮೇಲಿನವರಂತೆ ಪ್ರತ್ಯಕ್ಷವಾಗಿ ರಾಷ್ಟ್ರೀಯ ಚಳುವಳಿಯಲ್ಲಿ ಧುಮುಕಲಿಲ್ಲ, ರಾಜಕೀಯ ಪಕ್ಷಕ್ಕೆ ಸೇರಲಿಲ್ಲ. ಕಾಂಗ್ರೆಸ್ಸಿಗೆ ಸೇರಿ ಸೆರೆಮನೆಯ ವಾಸವನ್ನನುಭವಿಸಿದ್ದರೆ ಅವರು ರಾಷ್ಟ್ರೀಯ ನಾಯಕರಾಗುತ್ತಿದ್ದರೇನೋ ನಿಜ. ಆದರೆ ಅವರ ಬರಹಗಳ ಮಟ್ಟವೇನೂ ಏರುತ್ತಿರಲಿಲ್ಲ. ರವೀಂದ್ರನಾಥ ಠಾಕೂರರು 'ಜನಗಣಮನ' ಗೀತೆಯನ್ನು ಬರೆದು ಪ್ರಸಿದ್ಧವಾದ ಮೇಲೆಯೇ ರಾಷ್ಟ್ರೀಯ ಹೋರಾಟದಲ್ಲಿ ಹೆಚ್ಚು ಆಸಕ್ತಿ ತಾಳಿದರು. ಸರೋಜಿನಿ ನಾಯ್ಡು ಅವರು ಕೂಡ ಕಾಂಗ್ರೆಸ್ಸನ್ನು ಸೇರುವ ಮುಂಚೆಯೇ ಕಾವ್ಯಸಿದ್ಧಿಯನ್ನು ಗಳಿಸಿದ್ದರು. ಆದರೆ ಮಂಜಪ್ಪನವರಂತಹ ಅಂದಿನ ಸಮರ್ಥ ಬರೆಹಗಾರರಿಗೆ ಬಂಗಾಲಿ, ಹಿಂದಿ ಅಥವಾ ತಮಿಳು ಗ್ರಂಥಕರ್ತರಂತೆ ವ್ಯಾಪಕ ಮನ್ನಣೆಯನ್ನು ಪಡೆಯು-

ವುದು ಸಾಧ್ಯವಿರಲಿಲ್ಲ. ಏಕೆಂದರೆ, ಕನ್ನಡ ಮಾತನಾಡುವವರ ಸಂಖ್ಯೆ ಸಣ್ಣದು. ಎರಡನೆಯದಾಗಿ ಬಂಗಾಲ ಮತ್ತು ಮುಂಬಯಿ ಪ್ರಾಂತಗಳು ಶಿಕ್ಷಣದಲ್ಲಿ ಹಾಗೂ ರಾಷ್ಟ್ರೀಯ ಹೋರಾಟದಲ್ಲಿ ಇತರ ಪ್ರಾಂತ್ಯಗಳಿಗಿಂತಲೂ ಮುಂದಿದ್ದವು. ಬಂಗಾಲವಂತೂ ಎಲ್ಲರಿಗಿಂತಲೂ ಮುಂದಿತ್ತು. ಈ ಸೌಕರ್ಯ ಕನ್ನಡ ಗ್ರಂಥ ಕರ್ತರಿಗೆ ಸಿಗಲಿಲ್ಲ. ಅಲ್ಲದೆ ಕನ್ನಡನಾಡು ಕೂಡ ಒಂದಾಗಿರದೆ ಅಲ್ಲಲ್ಲಿ ಹಂಚಿಹೋಗಿತ್ತು. ಆದರೂ ಮಂಜಪ್ಪನವರ ವಿಚಾರಧಾರೆ ಮಾತ್ರ ಇತರರಿಗಿಂತ ಯಾವ ವಿಧದಲ್ಲಿ ಕಡಿಮೆಯಾಗಿರಲಿಲ್ಲ. ಅವರು ಇತರರಂತೆ ಕವಿಗಳಾಗಿರಲಿಲ್ಲ. ಗದ್ಯಬರಹಗಳ ಮೂಲಕವೇ ಪ್ರಚಂಡ ಜನಜಾಗೃತಿಯನ್ನುಂಟುಮಾಡಿದರು. ಮಂಜಪ್ಪನವ-ರನ್ನು ನಾವು ನಮ್ಮ ನೆರೆಯ ಪ್ರಾಂತದ ತಮಿಳುನಾಡಿನ ಸುಬ್ರಹ್ಮಣ್ಯ ಭಾರತಿಯೊಡನೆ ಹೋಲಿಸಬಹುದು. ಇಬ್ಬರೂ ರಾಷ್ಟ್ರೀಯತೆಯ ಸಂದೇಶವನ್ನು ನಾಡಿನಲ್ಲಿ ಹರಡಿದರು. ಇಬ್ಬರೂ ಅಸ್ಪೃಶ್ಯತಾ ನಿವಾರಣೆಯ ಶ್ರೇಷ್ಠ ಪುರಸ್ಕರ್ತರು. ಸ್ತ್ರೀ-ಸ್ವಾತಂತ್ರ್ಯದ ಬೆಂಬಲಿಗರು. ಇಬ್ಬರೂ ಬಡತನದ ಬೇಗೆಯಲ್ಲಿ ಸಿಕ್ಕು ಲೇಖನ ವ್ಯವಸಾಯವನ್ನು ಕೈಕೊಂಡವರು. ಇಬ್ಬರೂ ರಾಷ್ಟ್ರಸ್ವಾತಂತ್ರ್ಯಕ್ಕಾಗಿ ಪರಿಶ್ರಮಿಸಿದರು. ಆದರೆ ಅವರಲ್ಲಿ ಕೆಲವು ಮುಖ್ಯ ವ್ಯತ್ಯಾಸಗಳೂ ಇದ್ದವು. ಭಾರತಿಯವರು ಸ್ವಾತಂತ್ರ್ಯದ ಸಲುವಾಗಿ ಕಾವ್ಯದ ಮೂಲಕ ಸ್ಫೂರ್ತಿಯನ್ನಿತ್ತರೆ, ಮಂಜಪ್ಪನವರು ಗದ್ಯಬರಹಗಳ ಮೂಲಕ ರಾಷ್ಟ್ರಜಾಗೃತಿ-ಯನ್ನುಂಟುಮಾಡಿದರು. ಮಂಜಪ್ಪನವರು ಕವಿಯಾಗಿರದೆ ವಿಚಾರ ಶಕ್ತಿಯ ಪ್ರಜ್ಞಾಶಾಲಿಗಳಾಗಿದ್ದರು. ಭಾರತಿಯು ಸಂಸಾರಿ

ಯಾಗಿದ್ದು ಮಂಜಪ್ಪನವರು ಸನ್ಯಾಸಿಯಾಗಿದ್ದರು. ವ್ಯತ್ಯಾಸ-ಗಳಿದ್ದರೂ ಇಬ್ಬರೂ ಏಕನಿಷ್ಠೆಯಿಂದ ರಾಷ್ಟ್ರಸೇವೆ ಮಾಡಿದರು. ಇಬ್ಬರ ಕೃತಿಗಳೂ ಜನರ ಮೆಚ್ಚಿಗೆಗೆ ಪಾತ್ರವಾದವು. ಹೀಗೆ ಮಂಜಪ್ಪನವರನ್ನು ಇತರರೊಡನೆ ಹೋಲಿಸಿದಾಗ ಕೆಲವು ಭಿನ್ನತೆ ಗಳನ್ನು ಕಾಣಬಹುದಾದರೂ ಸ್ವಪ್ರಯತ್ನದಿಂದ ತಮ್ಮ ಪ್ರತಿಭೆ ಯನ್ನು ಬೆಳೆಯಿಸಿಕೊಂಡು ಅನೇಕ ಎಡರುತೊಡರುಗಳನ್ನು ಎದು-ರಿಸಿ ಗ್ರಂಥರಚನೆ ಮಾಡಿ ಕನ್ನಡ ಸಾಹಿತ್ಯದ ಸಿರಿಯನ್ನು ಬಹುವಾಗಿ ಹೆಚ್ಚಿಸಿದರು. ಅವರು ಇಂಗ್ಲಿಷ್ ಅಥವಾ ಹಿಂದಿ ಮುಂತಾದ ಇತರ ಭಾಷೆಗಳಲ್ಲಿ ಬರೆದಿದ್ದರೆ ಹೆಚ್ಚಿನ ಪ್ರಖ್ಯಾತಿ ದೊರಕುತ್ತಿದ್ದುದರಲ್ಲಿ ಸಂಶಯವಿಲ್ಲ. ಆದರೆ ಅವರ ರಾಷ್ಟ್ರೀಯ ವಿಚಾರಗಳು ಇತರ ಹೆಸರಾಂತ ರಾಷ್ಟ್ರೀಯ ಬರಹಗಾರರ ವಿಚಾರಗಳಿಗಿಂತ ಯಾವ ರೀತಿಯಲ್ಲೂ ಕಡಿಮೆಯಾಗಿಲ್ಲ. ಇಂಗ್ಲೀಷಿಗೆ ಅನುವಾದವಾದ ಅವರ ಒಂದೆರಡು ಕೃತಿಗಳನ್ನು ಓದಿದ ಯಾರಿಗಾದರೂ ಇದು ಮನವರಿಕೆ ಯಾಗುತ್ತದೆ. ಈ ಎಲ್ಲ ಕಾರಣಗಳಿಂದ ಶ್ರೀ ಮಂಜಪ್ಪನವರು ಭಾರತೀಯರೆಲ್ಲರಿಗೂ ಪ್ರಾತಃಸ್ಮರಣೀಯರಾಗಿದ್ದಾರೆ.



## ೫. ಅನುಬಂಧ

### ಶ್ರೀ ಮಂಜಪ್ಪನವರು ರಚಿಸಿದ ಇಲ್ಲವೆ ಸಂಪಾದಿಸಿ ಪ್ರಕಟಿಸಿದ ಪುಸ್ತಕಗಳು

ಸ್ವಕರ್ತವ್ಯ ಸಿದ್ಧಾಂತ
ಮಹಾತ್ಮಾ ಗಾಂಧಿಯವರ ಈವರೆಗಿನ ಚರಿತ್ರೆ
ಶ್ರೀ ಸ್ವಾಮಿ ರಾಮತೀರ್ಥರವರ ಚರಿತ್ರೆ ಮತ್ತು ಉಪನ್ಯಾಸಗಳು (ನಾಲ್ಕು ಪುಸ್ತಕಗಳು)
ಬುದ್ಧಿಯ ಮಾತು
ಆರೋಗ್ಯ ಜೀವನ
ಆಧುನಿಕ ಜರ್ಮನಿ
ಪತಿತೋದ್ಧಾರ
ವಾರದ ಮಲ್ಲಪ್ಪನವರ ಚರಿತ್ರೆ
ಭಾರತೀಯ ದೇಶಭಕ್ತಿ
ಶ್ರೀ ಬಸವ ಚರಿತ್ರೆ
ವಿಜಯವಾಣಿ
ಬುದ್ಧ ಚರಿತ್ರೆ
ಖಾದಿಶಾಸ್ತ್ರ
ಬಸವ ಬೋಧಾಮೃತ

ಶುದ್ಧಿ ಮತ್ತು ಸಂಘಟನೆ
ಪ್ರಮಥಾಚಾರ ದೀಪಿಕೆ
ಸ್ತ್ರೀನೀತಿ ಸಂಗ್ರಹ
ದಾಂಪತ್ಯ ಧರ್ಮ
ಲಜಪತರಾಯರ ಚರಿತ್ರೆ
ಶ್ರೀ ಲಿಂಗರಾಜರ ಚರಿತ್ರೆ
ವೀರಶೈವ ಮತಬೋಧೆ
ವೀರಶೈವ ಮತತತ್ವ
ಕಾಯಕವೇ ಕೈಲಾಸ
ಪ್ರಭುದೇವರ ಕಥೆ
ಏಕಲವ್ಯನ ಕಥೆ
ಜಾತಿಯವಾದ ವಿಮರ್ಶೆ
ವಚನಕಾರರ ಸಮಾಜರಚನೆ (ಸಂಪಾದಿತ)
ವೀರಶೈವ ಏಕೀಕರಣ
ಪುಲಿಕೇಶಿಯ ಚರಿತ್ರೆ
ಕಚದೇವನ ಕಥೆ
ಸ್ವಾಮಿ ವಿವೇಕಾನಂದರ ಚರಿತ್ರೆ
ಸುಗ್ಗಲಾದೇವಿಯ ಕಥೆ
ದೇವಯಾನಿಯ ಕಥೆ
ಅಕ್ಕನ ಉಪದೇಶ
ಅಣ್ಣನ ಅರ್ಪಣಯೋಗ
ತರುಣರ ಕೈಗನ್ನಡಿ

ಗಾಂಧಿಯವರ ಗೋಸೇವೆ
ಕಳೆದ ಮುವತ್ತು ವರ್ಷಗಳ ನನ್ನ ಕಾಣಿಕೆ
ಕೇಕ್ ಹಾರ್ಡಿಯವರ ಭಾರತ ಪರ್ಯಟನ
ಸತ್ಯಾಗ್ರಹ
ಬ್ರಹ್ಮಚರ್ಯ
ಖಾದಿ
ಅಹಿಂಸೆ
ಸತ್ಯಾಗ್ರಹ ಪದ್ಯಾವಳಿ
ಸುಬೋಧಸಾರ (ಸಂಪಾದಿತ)
ಎಚ್ಚೆತ್ತ ಹಿಂದುಸ್ಥಾನ
ಋಗ್ವೇದಸಾರ (ಅಪ್ರಕಟಿತ)
ಶ್ರೀಗುರು ಸಂಗನ ಬಸವ ಸ್ತುತಿ (ಹಾಡುಗಬ್ಬ)

ಶ್ರೀ ಮಂಜಪ್ಪನವರ ಸಮಗ್ರ ಕೃತಿಗಳನ್ನು ಪ್ರಕಟಿಸುವ ಕಾರ್ಯ ರೂಪುಗೊಂಡು ಹರ್ಡೇಕರ ಮಂಜಪ್ಪ ಸ್ಮಾರಕ ಗ್ರಂಥ-ಮಾಲೆಯು ೧೯೬೫ರಿಂದು 'ರಾಷ್ಟ್ರಧರ್ಮ ದ್ರಷ್ಟಾರ ಹರ್ಡೇಕರ ಮಂಜಪ್ಪ' ಎಂಬ ಹೆಬ್ಬೊತ್ತಿಗೆಯನ್ನು ಪ್ರಕಟಿಸಿತು. ಮಂಜಪ್ಪನವರು ಬರೆದ ಶ್ರೀ ಬಸವ ಚರಿತ್ರೆ, ನನ್ನ ಕಾಣಿಕೆ, ಮತ್ತು ಭಾರತೀಯ ದೇಶಭಕ್ತಿ ಎಂಬ ಶ್ರೇಷ್ಠ ಕೃತಿಗಳು ಇಂಗ್ಲಿಷ ಭಾಷೆಯಲ್ಲಿ ಪ್ರಕಟಗೊಂಡವು.

———

## ಈ ಮಾಲೆಯ
## ಇತ್ತೀಚಿನ ಹತ್ತು ಪ್ರಕಟನೆಗಳು

೯೧. ಕಬೀರದಾಸ —ಬಿ. ಎಸ್. ಸಿರೋಳ

೯೨. ಬ್ಯಾಂಕುಗಳ ರಾಷ್ಟ್ರೀಕರಣ —ಎಸ್. ಜಿ. ಕರಬಂಟನಾಳ

೯೩. ಪ್ರಾಚೀನ ಭಾರತದಲ್ಲಿ
ಶ್ರಮಜೀವಿಗಳ ಪಾತ್ರ—ಎಸ್. ಜಿ. ಘಟಪಣದಿ

೯೪. ಹಿಂದುಸ್ಥಾನಿ ಸಂಗೀತದ
ರೂಪರೇಷೆಗಳು —ಎ. ಯು. ಪಾಟೀಲ

೯೫. ಶ್ರೀ ಅರವಿಂದ ಸ್ಮರಣೆ —ಎಸ್. ಎಸ್. ಮಾಳವಾಡ

೯೬. ಮಾನವಜೀವನ ಹಾಗೂ
ಭೌಗೋಲಿಕ ಪರಿಸರ —ಡಿ. ಜಿ. ಕುಲಕರ್ಣಿ

೯೭. ಲಕ್ಕಣ ದಂಡೇಶ —ವ್ಹಿ. ಶಿವಾನಂದ

೯೮. ವ್ಯಾವಹಾರಿಕ ಮಾನವಶಾಸ್ತ್ರ —ಕೆ. ಜಿ. ಗುರುಮೂರ್ತಿ

೯೯. ಪ್ರಾಚೀನ ಗ್ರೀಕರ
ಅಮರ ಕೊಡುಗೆಗಳು —ಡಿ. ಟಿ. ಜೋಶಿ

೧೦೦. ಭರ್ತೃಹರಿಯ ನೀತಿಶತಕ —ಡಿ. ಎನ್. ಶಾನಭಾಗ

---

ವ್ಯಾಸಂಗ ವಿಸ್ತರಣ ಹಾಗೂ ಪ್ರಕಟನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ